ಚೆಂದುಗಿಡಿ“ ಇಲ್ಲದಿದ್ದರೆ, ಇಲ್ಲದಿದ್ದರೆ ಅವರನ್ನು ಇಲ್ಲೇ ಕೊಲ್ಲಿಸ ಬೇಕು” ಎಂದು ಸಾಲಿಗೆ ಕಚ್ಚಿ ಹೇಳಿದನು. ಆ ಕಡೆಯ ವಾಕ್ಯವು ಕಾಯಸ ದಲ್ಲಿ ಇರಲಿಲ್ಲ.

ಕೇಮರ ಬಲ್ಲಾಳ–“ಕಳುಹಿಸದಿದ್ದರೆ ಅವನು ಏನು ಮಾಡುತ್ತಾನಂತೆ?”

ಚೆಂದುಗಿಡಿ—“ಅವರನ್ನು ಹಿಂದಕ್ಕೆ ಕಳುಹಿಸಿ ಇಲ್ಲವೆ ಕೊಂದು ಹಾಕಿ, ನಮ್ಮೊಳಗಿನ ಪೂರ್ವ ಸ್ನೇಹವನ್ನು ಬೆಳಿಸುವುದು; ನಮ್ಮ ಪಡುಮಲೆ ಬೀಡಿನ ಮಾನಮರ್ಯಾದೆಯನ್ನು ಕಾಪಾಡುವುದು—ಹೀಗೆ ಸಾಷ್ಟಾಂಗ ನಮಸ್ಕಾರ ಪೂರ್ವಕವಾಗಿ ಬರೆಯಿಸಿರುತ್ತಾರೆ.

ಕೇಮರ ಬಲ್ಲಾಳ—“ಸರಿ! ಬೀಡಿನ ಗೌರವವು ನಮಗೂ ಒಂದೇ, ಅವರಿಗೂ ಒಂದೇ. ಹಾಗಾದರೆ ಅವರ ಬೀಡಿನ ಮರ್ಯಾದೆಯನ್ನು ನಾವು ಕಾಯಬೇಕಷ್ಟೆ—”

ಚೆಂದುಗಿಡಿ—“ಬುದ್ಧಿ! ಅಪ್ಪಣೆಯಾದರೆ ನಾನು ಮಾಡುತ್ತೇನೆ.”

ಹೀಗೆ ಹೇಳಿ ಚೆಂದುಗಿಡಿಯು ಪಡುಮಲೆಯಿಂದ ಬಂದ ಓಲೆಯ ಒಕ್ಕಣೆಯಂತೆ ನಡಿಸತಕ್ಕ ಉಪಾಯಗಳನ್ನು ಸೂಚಿಸಿ, ಬೀಡಿನಿಂದ ಹೊತ್ತು ಮುಳುಗುವಷ್ಟರೊಳಗೆ ತನ್ನ ಮನೆಗೆ ಹಿಂದೆ ಹೋಗುತಿದ್ದನು.

ಆ ಹೊತ್ತಿಗೆ ಚೆಂದುಗಿಡಿಯ ಮನೆಯ ದಾರಿ ಹಿಡಿದು ಕೋಟಿ ಚೆನ್ನಯರೊಟ್ಟಿಗೆ ಈಚೆಗೆ ಬರುತಿದ್ದ ಪಯ್ಯಬೈದ್ಯನು ಚೆಂದುಗಿಡಿಯನ್ನು ಕಂಡು, “ಅಯ್ಯಾ! ನಾವು ನಿಮ್ಮಲ್ಲಿಗೆ ಹೋಗುತಿದ್ದೆವು. ನಿಮ್ಮನ್ನು ಬೀಡಿಗೆ ಕರೆಯಿಸಿದ್ದಾರೆಂದು ಕೇಳಿ ಈ ದಾರಿಯಾಗಿ . . . . .”

ಚೆಂದುಗಿಡಿಯು ಅವನನ್ನು ಮಾತು ಮುಗಿಸಲಿಕ್ಕೆ ಬಿಡದೆ, ಅವನ ಕೈ ಹಿಡಿದು, ಮೂವರನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಕೂಡಲೆ ಒಳಗಿನಿಂದ ಬಂದ ಹಾಲಿನ ಗಿಂಡಿ, ಸಕ್ಕರೆಯ ತಬಕು, ಕೆಂದಾಳೆ ಸೀಯಾಳ–ಇವುಗಳ ಉಪಚಾರ ಮಾತ್ರವಾಯಿತು, ಅವನ್ನು ಯಾರೂ ಮುಟ್ಟಲಿಲ್ಲ. ತರುವಾಯ ವೀಳ್ಯದ ತಟ್ಟೆ ಬಂತು—ಪಂಚವಳ್ಳಿ ಹಸಿ ಯೆಲೆ, ಇಬ್ಭಾಗದ ಅಡಕೆಯ ಹೋಳು, ಬೆಣ್ಣೆಯಂಥ ಬಿಳಿಸುಣ್ಣ, ಸೂರತಿ ಹೊಗೆಸೊಪ್ಪು. ಪಯ್ಯನು ಎಲೆಯನ್ನು ಒರಸಿ, ಉಗುರಿಂದ ತುಡಿಯನ್ನು

ಚಿಪಟಿ ನೆತ್ತಿಗೆ ಇಟ್ಟು, ಸುಣ್ಣ ಸವರುತಿದ್ದಾಗ, ಚೆಂದುಗಿಡಿಯು ಕಂಚಿನ ಹಡಪವನ್ನು ಅವನ ಪಕ್ಕದಲ್ಲಿ ಮಡಗಿ, "ನೀವು ಬಂದ ಕಾರ್ಯ ಗೊತ್ತಾಯಿತು" ಎಂದು ಪ್ರಾರಂಭಿಸಿದನು.

ಚೆನ್ನಯ—"ಗೊತ್ತಾಗುವುದಕ್ಕೆ ಆರು ತಿಂಗಳು ಹಿಡಿದರೆ, ಪೂರಯಿಸುವುದಕ್ಕೆ ಎಷ್ಟು ಕಾಲ ಬೇಕಾಗುವುದೊ?"

ಕೋಟಿ—"ಅಯ್ಯಾ, ನಾವು ಬಲ್ಲಾಳರ ಭೇಟಿಯನ್ನು ನಿರೀಕ್ಷಿಸಿ ಬಹಳ ಕಾಲದಿಂದ ಹೆರವರ ಮನೆಯಲ್ಲಿ ಇದ್ದೇವೆ. ಒಮ್ಮೆ ಅವರ ದರ್ಶನವಾಯಿತೆಂದರೆ, ನಾವು ಇದು ವರೆಗೆ ಕಾದುಕೊಂಡಿದ್ದ ಬೇಸರು ಹೋಗಿಬಿಡುತ್ತದೆ. ಬಲ್ಲಾಳರನ್ನು ನಿಮ್ಮ ಮೂಲಕ ಕಾಣಬೇಕೆಂದು ನಮ್ಮ ಭಾವನ ಅಭಿಪ್ರಾಯವಿದೆ."

ಪಯ್ಯಬೈದ್ಯ—"ಏನು ಹೇಳುತ್ತಿ, ಭಾವಾ? ನಮಗೆ ಬೇಕಾದಾಗ ಬಲ್ಲಾಳರು ನೋಡಸಿಗಲಿಕ್ಕೆ ಅವರೇನು ನಾವು ಕಟ್ಟುವ ತಾಳೆಯ ಮರವೊ? ಆಳ ನೋಡಿ ತೊರೆಯನ್ನು ದಾಟಬೇಕು, ವೇಳೆ ನೋಡಿ ದೊರೆಯನ್ನು ಕಾಣಬೇಕು. ಅರಸನ ಚಿತ್ತ, ಬೀಡಿನ ಸಂಗತಿ, ಅಲ್ಲವೆ ಚೆಂದುಗಿಡಿ?"

ಚೆನ್ನಯ—"ಇನ್ನಾದರೂ ಕಾಣುವುದಕ್ಕೆ ಇದೆಯೊ ಇಲ್ಲವೊ?"

ಚೆಂದುಗಿಡಿ—"ಅದಕ್ಕೇನು ಅಡ್ಡಿ?"

ಚೆನ್ನಯ—"ಹಾಗಾದರೆ, ಯಾವಾಗ?"

ಚೆಂದುಗಿಡಿ—"ನಾಳೆ."

ಪಯ್ಯಬೈದ್ಯ—"ನಾಳೆ ಸಂಕ್ರಾಂತಿ, ನಾಳೆ ಬೇಡ—ನಾಡದು ಆಗಬಹುದು."

ಚೆಂದುಗಿಡಿ—"ನಾಡದು ಸೋಮವಾರ—"

ಚೆನ್ನಯ—"ಎಷ್ಟು ಹೊತ್ತಿಗೆ?"

ಚೆಂದುಗಿಡಿ—"ಹಟ್ಟಿಯಿಂದ ಹೋದ ದನ ಹಟ್ಟಿಯೊಳಗೆ ಬರುವುದರೊಳಗೆ."

ಕೋಟಿ—"ಆ ದಿನ ನಿಮ್ಮ ಕೈಗೆ ಬಿಡುವು ಇದೆಯಷ್ಟೆ!"

ಚೆಂದುಗಿಡಿ—"ಹೌದು, ಹೌದು."

ಚೆಂದುಗಿಡಿಯ ಮನೆಯಿಂದ ಮೂವರೂ ಹಿಂದೆರಳಿದರು. ದಾರಿಯಲ್ಲಿ ಚೆನ್ನಯನು "ಅಣ್ಣ, ಈ ಚೆಂದುಗಿಡಿಯನ್ನು ನೋಡಿದಾಗ ಯಾರ ನೆನಪಾಗುತ್ತದೆ?" ಎಂದು ಕೇಳಿದನು.

ಕೋಟಿ—"ಅವನು ಗಿಡುಗನ ಹಾಗೆ ಕಾಣುತ್ತಾನೆ."

ಚೆನ್ನಯ—"ಅವನ ಬಾಯಿ ನೆಗಳೆಯ ಬಾಯ ಹಾಗೆಯೇ ಇದೆ. ಜೋಯಿಸರು ಹೇಳಿದ ನೆಗಳೆಯ ನೆನಪು ಬರುತ್ತದೆ—ಅಲ್ಲವೆ ಅಣ್ಣ?"

ಅಷ್ಟರಲ್ಲಿ ಮನೆಯು ಹತ್ತಿರವಾಯಿತು; ಮೂವರು ಒಳಗೆ ಹೋದರು.

ಸೋಮವಾರ ಸೂರ್ಯೋದಯವಾಯಿತು. ಕೋಟಿಚೆನ್ನಯರು ಹೊತ್ತು ನೆತ್ತಿಗೆ ಬರುವುದರೊಳಗೆ ಮುಂಗೈಗೆ ಮುಟ್ಟುವಂತೆ ಗಂಧವನ್ನು ಲೇಪಿಸಿಕೊಂಡು, ಹಣೆ ತುಂಬುವಂತೆ ತುಳಸಿಕಟ್ಟೆಯ ಮೃತ್ತಿಕೆಯಿಂದ ನಾಮವನ್ನು ಎಳೆದುಕೊಂಡು, ತೊಡೆಯಗಲದ ಚಲ್ಲಣವನ್ನು ಉಟ್ಟು, ಬಲು ಉದ್ದದ ಪಟ್ಟೆಯ ದಟ್ಟಿಯನ್ನು ನಡುವಿಗೆ ಬಿಗಿದು, ಗಿಳಿಬಣ್ಣದ ಟೊಪ್ಪಿಗೆಯಿಂದ ತಲೆಯನ್ನು ಮುಚ್ಚಿ, ರಾಮ ಲಕ್ಷ್ಮಣ ಎಂಬ ಎರಡು ಕತ್ತಿಗಳನ್ನು ಕೈಯಲ್ಲಿ ಹಿಡಿದುಕೊಂಡು ಕೇಮರ ಬಲ್ಲಾಳನ ದರ್ಶನಕ್ಕಾಗಿ ಹೊರಟರು.

ಅವರು ದಾರಿಯ ಮೇಲೆ ಮುಟ್ಟುವುದರೊಳಗೆ ಪಯ್ಯಬೈದ್ಯನು ಕಲ್ಲೆಡವಿ ಬಿದ್ದರೂ ಬಿದ್ದಂತೆ ತೋರಿಸಿಕೊಳ್ಳದೆ ಮುಂದೆ ಹೋಗುವವರನ್ನು ಕುರಿತು "ಒಂದು ಗಳಿಗೆ ತಡೆಯಿರಿ. ನನಗೆ ನಿನ್ನೆಯಿಂದ ಅಪಶಕುನಗಳೇ ಕಾಣುತ್ತವೆ. ರಾತ್ರಿ ಕೆಟ್ಟ ಕನಸು ಬಿತ್ತು—ಕಷ್ಟದಲ್ಲಿ ಬಿದ್ದು ಹೊರಳಾಡಿದ ಕಾಡಾನೆಯು ನನ್ನನ್ನು ಸೊಂಡಿಲಲ್ಲಿ ಹಿಡಿದು ನೆಲಕ್ಕೆ ಅಪ್ಪಳಿಸಿ ಬಿಟ್ಟಂತೆ ಕನಸು ಕಂಡೆ. ಎಚ್ಚತ್ತು ಹೊರಬರುವಾಗ ಚೆನ್ನಯನು ನಿದ್ದೆಯಲ್ಲಿ 'ಅಣ್ಣಾ, ಕೋಟಿ' ಎಂದು ಕನಿಕರದಿಂದ ಕೂಗಿದ್ದನ್ನು ಕೇಳಿದೆ. ಈಗ ದಾರಿಯಲ್ಲಿ ಕಾಲಿಡುವಾಗ ಮುಗ್ಗರಿಸಿದಂತಾದೆ. ಆದುದರಿಂದ ನೀವು ಈ ಕೆಂದಾಳೆಯ ಪದ್ಮಕಟ್ಟೆಯ ಮೇಲೆ ಕುಳಿತುಕೊಂಡು ಅಪಶಕುನವನ್ನು ಕಳೆಯಲೇ ಬೇಕು" ಎಂದನು. ಹೀಗೆ ದುಶ್ಶಕುನಗಳನ್ನು ನಿವಾರಿಸಿಕೊಂಡು ಅವರು ಬೀಡನ್ನು ಮುಟ್ಟುವಾಗ ಹೊತ್ತು ಇಳಿಯಲಿಕ್ಕಾಯಿತು. ಇಳಿ ಹೊತ್ತಿನಲ್ಲಿ

ಚೆಂದುಗಿಡಿಯು ಬೆನ್ನು ಹಿಡಿದು, ರಾಜಾಂಗಣವನ್ನು ದಾಟಿ ಬರುತಿದ್ದ ಆ ವೀರಕುಮಾರರ ಬಿಳಿ ನಗುವಿನ, ನಗುಮೊಗದ, ಮೊಗಸಿರಿಯ, ಸಿರಿಯ ಸಿಂಗಾರವನ್ನು ನೋಡುವುದಕ್ಕೆ ನೂರು ಕಣ್ಣು, ಬಣ್ಣಿಸುವುದಕ್ಕೆ ನೂರು ನಾಲಗೆ ಇದ್ದರೂ ಸಾಲದು.

ಅವರು ಚಾವಡಿಯ ಮೇಲೆ ಬರುವಷ್ಟರಲ್ಲಿ ಚೆಂದುಗಿಡಿಯು ಒಳಕ್ಕೆ ಹೋಗಿ ಒಂದು ನಿಮಿಷದಲ್ಲಿಯೇ ಹೊರಕ್ಕೆ ಬಂದು, "ಬೈದ್ಯರೇ, ನಿಮ್ಮ ಕಾರ್ಯವು ರಹಸ್ಯದ್ದಿದ್ದರೆ, ನಿಮ್ಮಿಬ್ಬರಿಗೆ ಮಾತ್ರ ಒಳಗೆ ಅಪ್ಪಣೆಯಾಗಿದೆ" ಎಂದು ಹೇಳಿದನು.

ಅದಕ್ಕೆ ಕೋಟಿಯು "ಯಾವ ಗುಟ್ಟಾದರೂ ಬೀಡಿನಲ್ಲಿ ನಿಮ್ಮ ಕಿವಿಯ ಹೊರಗಲ್ಲವಷ್ಟೆ" ಎಂದನು.

ಚೆಂದುಗಿಡಿಯು "ಬಲ್ಲಾಳರ ಅಪ್ಪಣೆಯಂತೆ ನಡೆಯ ಬೇಕಾದದ್ದು ನನ್ನ ಕೆಲಸ. ಬಲ್ಲಾಳರಿಗೆ ಬೆಳಗ್ಗಿನಿಂದ ಮೈಯಲ್ಲಿ ಅಷ್ಟು ಸೌಖ್ಯವಿಲ್ಲವಂತೆ. ಆದುದರಿಂದ ನೀವಿಬ್ಬರೇ ಅವರನ್ನು ಹೋಗಿ ಕಾಣುವುದು ನನಗೆ ಮೇಲೆಂದು ತೋರುತ್ತದೆ. ಅದೇ—ಹೊಸತಾಗಿ ಕಟ್ಟಿಸಿದ ಮೇಲ್ಮಾಳಿಗೆ; ಅವರು ಅಲ್ಲಿಯೇ ಓಲಗವಾಗಿದ್ದಾರೆ. ನೀವು ಒಳಕ್ಕೆ ಹೋಗಿ; ನಾವು ಇಲ್ಲಿಯೇ ಕಾವಲು ಇದ್ದೇವೆ" ಎಂದು ಅವರಿಬ್ಬರನ್ನು ಒಡಂಬಡಿಸಿದನು.

ಕೋಟಿಚೆನ್ನಯರು ಒಳಕ್ಕೆ ಹೋಗಿ, ಮಾಳಿಗೆಯ ಬಡಗು ಗೋಡೆಯ ಒತ್ತಿನಲ್ಲಿದ್ದ ಗದ್ದಿಗೆಯನ್ನು ಸಮೀಪಿಸುವಷ್ಟರಲ್ಲಿ ಅದರ ಮೇಲೆ ಅರೆ ಒರಗಿದ್ದವನು ಮೈಯುಲುಗಿಸಿ, "ಬನ್ನಿ, ಇಲ್ಲೇ ಕುಳಿತುಕೊಳ್ಳಬಹುದು" ಎಂದು ಹೇಳಿ, ಹೂವಿನ ಚಾಪೆ ಹಾಸಿದ್ದ ಹಲಗೆಯನ್ನು ತೋರಿಸಿ, "ಹಸೆ ಇದೆ, ಕುಳಿತುಕೊಳ್ಳಿ; ಇದು ನಾವು ಕಟ್ಟಿಸಿದ ಹೊಸ ಮಾಳಿಗೆ—ಹೇಗಿದೆ?" ಎಂದು ತಾನೇ ಮಾತಾಡುವುದಕ್ಕೆ ಪ್ರಾರಂಭಿಸಿದನು.

ಅದಕ್ಕೆ ಚೆನ್ನಯನು "ಬುದ್ಧಿ, ಕೇಳಬೇಕೆ? ಮಾಳಿಗೆ ಚೆನ್ನಾಗಿದೆ—ಬಳ್ಳಿಯಷ್ಟು ಬಾವು ಇಲ್ಲ, ಮೂಗಿನಷ್ಟು ಮೊನೆ ಇಲ್ಲ" ಎಂದನು.

ಕೋಟಿಯ ಕಣ್ಣು ಗದ್ದಿಗೆಯ ಮೇಲೆಯೇ ಇದ್ದಾಗ, ಅವನ ಕಿವಿಗೆ ಬಾಗಿಲನವನು ಬಾಗಿಲು ಮುಚ್ಚಿದ ಸದ್ದು ಬಿತ್ತು, ಕೀಲಿನವನು ಕೀಲು

ಹಾಕಿದ ಶಬ್ದವು ಕೇಳಿಸಿತು. ಆಗ ಆತನು "ತಮ್ಮಾ, ಹಾಲೆಂದು ಬಾಯಿಗೆ ಮುಟ್ಟಿಸುವಾಗ ಅದು ಕಳ್ಳಿಯ ಹಾಲಾಯಿತಲ್ಲಾ! ಹಾಸಿಗೆಯೆಂದು ಒರಗು ವಷ್ಟರಲ್ಲಿ ಅದು ಮುಳ್ಳಿನ ಹಾಸಾಯಿತಲ್ಲಾ! ಇಂಬು ಎಂದು ನಂಬಿದ್ದು ಅಂಬು ಆಯಿತಲ್ಲಾ! ಇವನು ಬಲ್ಲಾಳನಲ್ಲ, ನಿಜವಾಗಿಯೂ ಬಲ್ಲಾಳನಲ್ಲ" ಎಂದು ಉದ್ರೇಕಗೊಂಡನು.

ಚೆನ್ನಯನು – "ಅಣ್ಣಾ! ನೀನು ಹೇಳಿದ್ದು ಸರಿಯೆ. ಬಲ್ಲಾಳನಿಗೆ ಗಿಳಿ ಮೂಗು, ಕುಡಿತೆ ಕಿವಿ, ಜಳ್ಳು ಹೊಟ್ಟೆ, ಅಂಡೆ ಕಾಲು ಎಂದು ಹೇಳುವು ದನ್ನು ಕೇಳಿದ್ದೇನೆ. ಇವನ ಮೈಕಟ್ಟು ಗರಡಿಯಲ್ಲಿ ಸಾಧಕ ಮಾಡಿದ ತೆರದಲ್ಲಿದೆ. ಇವನು ಬಲ್ಲಾಳನಿಗೆ ಹುಟ್ಟಿದ . . . . . ."

ಅಷ್ಟರಲ್ಲಿ ಗದ್ದಿಗೆಯ ಮೇಲೆ ಇದ್ದವನು ಚಿರ‍್ರನೆ ಚೀರಿ, ಕತ್ತಿಯನ್ನು ಜಳಪಿಸುತ್ತ, ಕೆಳಕ್ಕೆ ಇಳಿದು ಮುಂದೆ ಬರುತಿದ್ದನು.

ಚೆನ್ನಯನ ಕಣ್ಣು ಅರಳಿತು, ಹಲ್ಲುಗಳು ಒಂದನ್ನೊಂದು ಅಂಟಿ ಕೊಂಡುವು, ತೆರೆದ ಸೊಳ್ಳೆಯಿಂದ ಬಿಸಿ ಗಾಳಿಯು ಹೊರಟಿತು, ಮೈಕೂದಲು ಜುಮ್ಮೆಂದು ಎದ್ದು ನಿಂತಿತು.

ಅದನ್ನು ಕಂಡು ಕೋಟಿಯು ಅವನ ಕೈ ಹಿಡಿದು, "ಚೆನ್ನಯ, ತಡಿ, ದುಡುಕ ಬೇಡ" ಎಂದು ಹೇಳಿ, ಕತ್ತಿ ಹಿರಿದು ತನ್ನ ಮುಂದೆ ನಿಂತವನನ್ನು ಗುರುತಿಸಿ – "ತಮ್ಮಾ, ಇವನು ಬಲ್ಲಾಳನಲ್ಲ, ಬಲ್ಲಾಳನ ವೇಷದಿಂದ ಕುಳಿ ತಿದ್ದ ಅವನ ಬೀಡಿನ ಕೊಟ್ಟಾರಿ" ಎಂದು ಹೇಳಿ ಎದ್ದು ನಿಂತನು.

ಆದರೆ ಗದ್ದಿಗೆಯಿಂದ ಇಳಿದಿದ್ದ ಕೊಟ್ಟಾರಿಯು ಕೋಟಿಚೆನ್ನಯ ರನ್ನು ಎದುರಿಸದೆ, ಬಡಗು ಗೋಡೆಯಲ್ಲಿದ್ದ ಬಾಗಿಲನ್ನು ಸರ‍್ರನೆ ತೆರೆದು, ಅದನ್ನು ದಾಟಿ, ತನ್ನ ಬೆನ್ನ ಹಿಂದೆ ಅದನ್ನು ಕೀಲಿಸಿ ಹೊರಕ್ಕೆ ಹೋದನು. ಕೂಡಲೆ ಡೋಲು ಬಡಿದಂತೆ ಬಡ ಬಡ ಬಡ ಶಬ್ದವಾಯಿತು.

"ಪಡುಮಲೆಯಿಂದ ಬಂದವರನ್ನು ಸಾಂಗವಾಗಿ ಕಂಡದ್ದಾಯಿತು. ಇನ್ನು ಇವರು ನಮ್ಮ ಬೀಡಿನಲ್ಲಿ ಯಾರ ತೊಂದರೆಯು ಇಲ್ಲದೆ ಬೇಕಾ ದಷ್ಟು ಕಾಲ ಸುಖವಾಗಿ ಇರಬಹುದು" ಎಂಬ ಮಾತುಗಳು ಕೇಳ ಬಂದುವು; ಸ್ವರವು ಚೆಂದುಗಿಡಿಯ ಸ್ವರವಾಗಿತ್ತು.

ಇಕ್ಕಡೆಯ ಬಾಗಿಲುಗಳು ಮುಚ್ಚಿ ಬಿಟ್ಟಿದ್ದ ಮೇಲ್ಮಾಳಿಗೆಯಲ್ಲಿ ಕೋಟಿಚೆನ್ನಯರು ಚಾಪೆಯೊಳಗೆ ಹಿಡಿದಿದ್ದ ಹಾವಿನಂತೆ ಬುಸುಗುಟ್ಟುತ್ತ "ಅಯ್ಯೋ! ವಿಧಿಯೇ! ಇದು ಪಡುಮಲೆಯವರ ಹಗೆಯೇ? ಕೇಮರನ ಮೋಸವೇ? ನಮ್ಮ ಗ್ರಹಚಾರವೇ? ಹೀಗೆ ಮಳೆಗಾಲದಲ್ಲಿ ಮೋಡದ ಮೇಲೆ ಮೋಡವು ಕವಿಯುವಂತೆ ನಮ್ಮ ಮೇಲೆ ಆಪತ್ತಿನ ಮೇಲೆ ಆಪತ್ತು ಬರುತ್ತದಲ್ಲಾ! ನಮಗೆ ಸಾಯುವ ಕಾಲವು ಬಂತೇ? ಇದ್ದಾಗ ನಾವು ಓಲಗದ ಬಂಟರು; ಸತ್ತರೆ ವೈಕುಂಠದ ಬಂಟರು. ನಾವು ಒಟ್ಟಿಗೆ ಹುಟ್ಟಿದೆವು, ಒಟ್ಟಿಗೆ ಬೆಳೆದೆವು. ಇನ್ನು ಒಟ್ಟಿಗೆ ಏಕೆ ಸಾಯಬಾರದು?" ಎಂದು ನಾನಾ ಪ್ರಕಾರವಾಗಿ ಮರುಗುತಿದ್ದರು.

ನಡುಇರುಳು ದಾಟಿ ಹೋಗಿ, ಚಂದ್ರನು ಅಸ್ತಮಿಸುವುದಕ್ಕಾದರೂ ಇಬ್ಬರು 'ಮುಂದೇನು ಗತಿ'ಎಂದು ತಮ್ಮೊಳಗೆ ವಿಚಾರಿಸುತ್ತ, ಕಣ್ಣಿಗೆ ನಿದ್ದೆ ಬಾರದೆ ಕುಳಿತುಕೊಂಡಿದ್ದರು. ಮುಳುಗುವ ಚಂದ್ರನು ಆ ಮಾಳಿಗೆಯ ಒಂದು ಸಣ್ಣ ಕಿಟಿಕಿಯೊಳಗಿನಿಂದ ಈ ಇಬ್ಬರನ್ನು ಇಣಿಕಿನೋಡಿ, ಕೆಳಕ್ಕೆ ಇಳಿದನು. ಆಗ ಚೆನ್ನಯನು "ಅಣ್ಣಾ, ನನ್ನನ್ನು ಒಂದು ನಿಮಿಷ ನಿನ್ನ ಹೆಗಲ ಮೇಲೆ ಹೊತ್ತುಕೊಳ್ಳುವೆಯಾ? ನಾವು ಇಲ್ಲಿಂದ ತಪ್ಪಿಸಿಕೊಳ್ಳಬಹುದು" ಎಂದನು.

ಕೋಟಿಯು ತಮ್ಮನನ್ನು ಹೆಗಲ ಮೇಲೆ ಹಿಡಿದುಕೊಂಡು ಎದ್ದು ನಿಂತನು; ಹೆಗಲ ಮೇಲೆ ನಿಂತಿದ್ದ ಚೆನ್ನಯನ ಕೈಗಳಿಗೆ ಆ ಚಿಕ್ಕ ಕಿಟಿಕಿಯು ಎಟಕಿತು. ಕೂಡಲೆ ಆ ಕಿಟಿಕಿಯು ಅವನ ಬಲವಾದ ಕೈಗಳಿಂದ ಕುಲುಕಿದಂತಾಗಿ, ಗೋಡೆಯಿಂದ ಎಬ್ಬಿಸಲ್ಪಟ್ಟು, ಕಿಟಿಕಿ ಇದ್ದೆಡೆಯಲ್ಲಿ ಒಂದು ಬಿರುಕು ಕಾಣಿಸಿತು. ತರುವಾಯ ಅಣ್ಣತಮ್ಮಂದಿರು ತಮ್ಮ ನಡುವಿಗೆ ಬಿಗಿದುಕೊಂಡಿದ್ದ ದಟ್ಟಿಗಳನ್ನು ಬಿಚ್ಚಿ, ಅವೆರಡನ್ನು ಉದ್ದದ ಒಂದೇ ದಟ್ಟಿಯಾಗುವಂತೆ ಗಂಟಿಕ್ಕಿ, ಅದನ್ನು ಇಕ್ಕಡೆಗಳಿಂದ ಚೆನ್ನಾಗಿ ಎಳೆದು ನೋಡಿ ಪರೀಕ್ಷಿಸಿದರು. ಈ ಉದ್ದದ ದಟ್ಟಿಯ ಒಂದು ತುದಿಯನ್ನು ಚೆನ್ನಯನು ಕೈಯಲ್ಲಿ ಹಿಡಿದುಕೊಂಡನು, ದಟ್ಟಿಯ ಬಹು ಭಾಗವನ್ನು ಕೋಟಿಯು ನೆರಿಗೆನೆರಿಗೆಯಾಗಿ ಕಟ್ಟಿಕೊಂಡನು. ಈಗ ತಮ್ಮನು ಅಣ್ಣನ ಹೆಗಲನ್ನು ಮತ್ತೊಮ್ಮೆ ಏರಿ, ಗೋಡೆಯಲ್ಲಿದ್ದ ಆ ಬಿರುಕಿನಿಂದ

ಪ್ಪೆಯನ್ನು ತೂರಿಸಿಕೊಂಡು, ದಟ್ಟಿಯ ತುದಿಯನ್ನು ಬಿಡದೆ ಹೊರಕ್ಕೆ ಬಂದನು. ಒಳಗಿನಿಂದ ಕೋಟಿಯು ದಟ್ಟಿಯ ಭಾಗವನ್ನು ಬಿಡುವಷ್ಟಕ್ಕೆ ಚೆನ್ನಯನು ತನ್ನ ಕಾಲುಗಳನ್ನು ಒಂದೊಂದಾಗಿ ಗೋಡೆಗೆ ಆನಿಸಿಕೊಂಡು ಆ ದಟ್ಟಿ ಹಿಡಿದು ಮಾಟುತ್ತ ಮಾಟುತ್ತ ಕೆಳಕ್ಕೆ ಇಳಿದನು. ಈಗ ಚೆನ್ನಯನು ಅದನ್ನು ಕೆಳಗಿನಿಂದ ಎಳೆಯುವಷ್ಟಕ್ಕೆ ಒಳಗಿದ್ದ ಕೋಟಿಯು ಅದನ್ನು ಸೆಳೆದು ಸೆಳೆದು ಗೋಡೆಯನ್ನು ಹತ್ತುತ್ತ, ಕಿಟಿಕಿಯ ಕನ್ನವನ್ನು ಮುಟ್ಟಿದನು; ಅನಂತರ ಆ ದಟ್ಟಿಯ ತುದಿಯನ್ನು ಮಾಳಿಗೆಯ ಮಾಡಿನ ಮರದ ಅಡ್ಡಕ್ಕೆ ಕಟ್ಟಿ, ಅದನ್ನು ತೂಗಬಿಟ್ಟು, ಅದರ ಆಧಾರದಿಂದ ಮೆಲ್ಲನೆ ಕೆಳಕ್ಕೆ ಇಳಿದು ತಮ್ಮನನ್ನು ಸೇರಿಕೊಂಡನು. ಇಷ್ಟರಲ್ಲಿ ಚಂದ್ರನು ಮುಳುಗಿ ಕತ್ತಲು ಇನ್ನೂ ಕಪ್ಪಾದಂತೆ ಕಾಣಿಸಿತು. ಗುಂಡಿಯೊಳಗಿಂದ ತಪ್ಪಿಸಿಕೊಂಡು ಕತ್ತಲೆಯ ಕಾಡೊಳಗೆ ನುಗ್ಗಿಕೊಳ್ಳುವ ಸೊಕ್ಕಾನೆಗಳಂತೆ ಅವರಿಬ್ಬರು ಆ ಅಂಧಕಾರದಲ್ಲಿ ಅಲ್ಲಿ ಬಿದ್ದು ಇಲ್ಲಿ ಬಿದ್ದು, ಬೆಳಕು ಹರಿಯುವಷ್ಟರೊಳಗೆ ಪಂಜರದಿಂದ ಮಾಯವಾದರು.

ಮರುದಿನ ಬೆಳಗ್ಗೆ ಕೋಟಿಚೆನ್ನಯರ ಪಲಾಯನದ ಸಮಾಚಾರವು ಚೆಂದುಗಿಡಿಗೆ ಗೊತ್ತಾದರೂ ಅವನು ಅದನ್ನು ಕೇಮರಬಲ್ಲಾಳನ ಕಿವಿಗೆ ಬೀಳಿಸದೆ ಅವರಿಬ್ಬರು ಸೆರೆಯಲ್ಲಿ ಇದ್ದಾರೆ ಎಂಬಂತೆ ಸುದ್ದಿಯನ್ನು ಹರಹಿದನು; ಆದರೆ ಆಳುಗಳನ್ನು ಗುಟ್ಟಾಗಿ ಕಳುಹಿಸಿ ಮನೆ ಮನೆಗಳಲ್ಲಿ ಹುಡುಕಿಸಿದನು. ತಪ್ಪಿಹೋದ ಕೋಟಿಚೆನ್ನಯರು ತಪ್ಪಿಯೇ ಹೋದರು; ಪಂಜದ ಜನಗಳಿಗೆ ಮಾತ್ರ ಗೊತ್ತಾಗಲಿಲ್ಲ.



# ೩ನೆಯ ಭಾಗ.

## ಎಣ್ಮೂರಲ್ಲಿ.

ಪಂಜವನ್ನು ಬಿಟ್ಟ ಕೋಟಿಚೆನ್ನಯರು ಎಣ್ಮೂರು ಸೀಮೆಯ ದಾರಿ ಹಿಡಿದರು. ಮುಂಚಿನ ಕಾಲದಲ್ಲಿ ಪಂಜದಿಂದ ಎಣ್ಮೂರಿಗೆ ಹೋಗುವವರು ಸುತ್ತು ದಾರಿಯನ್ನು ಹಿಡಿಯಬೇಕಾಗಿತ್ತು. ಈಗ ಇರುವ ದಾರಿಯುದ್ದಕ್ಕೆಲ್ಲಾ ಆ ಕಾಲದಲ್ಲಿ ದಟ್ಟಡವಿ ಬೆಳೆದಿತ್ತು. ಹುಲಿಗಳು ಮೇಯುವ ಹೊಲದಂತೆಯೂ, ಆನೆಗಳು ಅಲೆಯುವ ಆಟದ ಬೈಲಂತೆಯೂ ಇದ್ದು, ಸುಮಾರು ಎರಡುಮೈಲು ಅಗಲಕ್ಕೆ ಮರಗಳಿಂದ ಕಿಕ್ಕಿರಿದಿದ್ದ ಈ ಕಾಡನ್ನು ಹಗಲು ಹೊತ್ತಿನಲ್ಲಾದರೂ ದಾಟುವುದಕ್ಕೆ ಆಗ ಜನರು ಧೈರ್ಯ ಪಡುತಿರಲಿಲ್ಲ. ಈ ಕಾಡೇ ಪಂಜಸೀಮೆಗೂ ಎಣ್ಮೂರು ಸೀಮೆಗೂ ಗಡಿಯಾಗಿದ್ದ ತುಪ್ಪೆಕಲ್ಲಿನ ಕಾಡು; ಇದರ ಸಂಬಂಧವಾಗಿ ಎರಡು ಸೀಮೆಗಳ ಬಲ್ಲಾಳರಿಗೆ ವಾದವಿವಾದಗಳು ಆಗಾಗ ಬರುತ್ತಲೇ ಇದ್ದುವು. ಅಡವಿಯ ಮೂಡುಕಡೆಯಲ್ಲಿ ಈಗ ಪಾಳುಬಿದ್ದಿರುವ ಅಯ್ಯನೂರು ಬೈಲಿಗಾಗಿ ಇಬ್ಬರು ಪರಸ್ಪರ ಹೊಡೆದಾಡುತಿದ್ದರು. ಕೋಟಿಚೆನ್ನಯರು ಈ ಬೈಲಿನ ಹತ್ತಿರದ ಅಡವಿಯಲ್ಲಿ ಅವಿತುಕೊಂಡು ಕೆಲವು ದಿನಗಳ ತನಕ ತಮ್ಮ ಪ್ರಾಣರಕ್ಷಣೆಯನ್ನು ಮಾಡಿಕೊಂಡರು.

ಪಡುಮಲೆಯ ಕೋಟಿಚೆನ್ನಯರ ಸಮಾಚಾರವು ಇದಕ್ಕಿಂತ ಮೊದಲೇ ಎಣ್ಮೂರಿನಲ್ಲಿ ಹಬ್ಬಿತ್ತು. ಅವರು ಪೆರುಮಾಳು ಬಲ್ಲಾಳನ ಗದ್ದಿಗೆಯಲ್ಲಿ ಗಡು ಇಡುವುದಕ್ಕೆ ಮುಂಚಿತವಾಗಿಯೇ ಅವರ ಸಾಕಣೆ ತಾಯಿ ಸಾಯಿನಬೈದಿತಿಯು ಪಡುಮಲೆಗೆ ಬೆನ್ನು ಹಾಕಿ, ಎಣ್ಮೂರಿಗೆ ಹೊರಟು ಬಂದು, ತನ್ನ ದೂರದ ಸಂಬಂಧಿಕರೊಬ್ಬರಲ್ಲಿ ಉಳುಕೊಂಡಿದ್ದಳು. ಕೋಟಿಚೆನ್ನಯರ ಪ್ರತಾಪವನ್ನು ಇವಳ ಬಾಯಿಂದ ಕೇಳಿದ ಸಂಟರಿಷ್ಟರೂ ಜಾತಿಮತಸ್ಥರೂ ಅದಕ್ಕಾಗಿ ಬಹಳ ಹೆಚ್ಚಳಪಡುತಿದ್ದರು. ಅವರಿಬ್ಬರ ಮೇಲಿದ್ದ ಈ ಹೆಚ್ಚಳವು ಆ ವೀರರ ಸಾಹಸಶೌರ್ಯಗಳ ವಾರ್ತೆಯು ಹೆಚ್ಚಿ

ದಷ್ಟಕ್ಕೆ ಭಯಭರಿತ ಭಕ್ತಿಯಾಯಿತು. 'ಹಿಂದೆ ಹುಟ್ಟಿಲ್ಲ, ಮುಂದೆ ಹುಟ್ಟ ಲಿಕ್ಕಿಲ್ಲ' ಎಂಬಂತಿದ್ದ ವೀರರಿಬ್ಬರನ್ನು ಎಣ್ಮೂರಿನ ಬಿಲ್ಲವರು ಕ್ರಮೇಣ ತಮ್ಮವರೆಂಬ ವಿಶ್ವಾಸದಿಂದ ಭಾವಿಸತೊಡಗಿದರು. ಹೀಗೆ ಕೋಟಿಚೆನ್ನ ಯರ ಪ್ರಶ್ನೆಯು ಎಣ್ಮೂರಲ್ಲಿ ಜಾತಿಪ್ರಸಂಗವಾಯಿತು. ಕೇಮರ ಬಲ್ಲಾಳನು ಅವರನ್ನು ಮೋಸದಿಂದ ಹಿಡಿದು ಸೆರೆಯಲ್ಲಿ ಇಟ್ಟಿದ್ದಾನೆಂಬ ಸುದ್ದಿಯಿಂದ ಬಿಲ್ಲರ ಉಡಿಯಲ್ಲಿ ಬೆಂಕಿಕಿಡಿಯನ್ನು ಕಟ್ಟಿದಂತಾಗಿ, ಅವರೆಲ್ಲರು ಒಟ್ಟುಕೂಡಿ ಎಣ್ಮೂರು ಬಲ್ಲಾಳನಿದ್ದಲ್ಲಿಗೆ ಹೋಗಿ, ಕೋಟಿ ಚೆನ್ನಯರನ್ನು ಅವರ ತಲೆ ಹೂ ಬಾಡದಂತೆ ನೋಡಿಕೊಂಡು ಅವರನ್ನು ಕೂಡಲೆ ಕಳುಹಿಸಿಕೊಡಲು ಕೇಮರ ಬಲ್ಲಾಳನಿಗೆ ಪತ್ರ ಬರೆಯಬೇಕೆಂಬ ದಾಗಿಯೂ, ಆತನು ಅದಕ್ಕೆ ಒಪ್ಪದಿದ್ದರೆ ಆತನ ಸೀಮೆಯನ್ನು ಒಳನುಗ್ಗಿ ಕೋಟಿಚೆನ್ನಯರನ್ನು ಬಿಡಿಸಿಕೊಂಡು ಎಣ್ಮೂರಿಗೆ ತರುವಂತೆ ತಮಗೆ ಅಪ್ಪಣೆಕೊಡಿಸಬೇಕೆಂಬದಾಗಿಯೂ ಅರಿಕೆಮಾಡಿಕೊಂಡರು. ಎಣ್ಮೂರು ಬಲ್ಲಾಳನು ಬಿಲ್ಲರ ಬಿನ್ನಹವನ್ನು ಕಿವಿಗೊಟ್ಟು ಕೇಳಿ, ತನ್ನ ಕಡೆಯ ಕಿನ್ನಿ ಚೆನ್ನಯನೆಂಬವನನ್ನು ಕರೆದು, "ಕೋಟಿಚೆನ್ನಯರನ್ನು ಸಂಧಿಮಧ್ಯಸ್ಥಿಕೆ ಯಿಂದ ಕರೆದುಕೊಂಡು ಬರುವಂತೆ ಪ್ರಯತ್ನಿಸು" ಎಂದು ಅಪ್ಪಣೆಮಾಡಿ, ಒಂದು ದಿನ ಪಂಜಕ್ಕೆ ಕಳುಹಿಸಿದನು.

ಆ ದಿನ ಮಧ್ಯಾಹ್ನ ಕೋಟಿಚೆನ್ನಯರು ತಾವು ಅಡಗಿಕೊಂಡಿದ್ದ ತುಪ್ಪೆಕಲ್ಲು ಅಡವಿಯಿಂದ ಹೊರಬಿದ್ದು ಮುಂದಿನ ದಾರಿಯನ್ನು ಹುಡುಕಿ ಸಂಚರಿಸುತ್ತಿರಲು, ಚೆನ್ನಯನು ಫಕ್ಕನೆ ನಿಂತು ಬಿಟ್ಟು, "ಅಣ್ಣಾ, ಇದೋ ಗಡಿಕಲ್ಲು, ಪಂಜ ಹಿಂದಕ್ಕಾಯಿತು—ಇದು ಎಣ್ಮೂರು" ಎಂದನು.

ಆಗ ಕೋಟಿಯು "ನನಗೆ ಬರಹ ಇಲ್ಲ. ಮೊದಲು ಹುಟ್ಟಿ, ನೆಟ್ಟಗೆ ಬೆಳೆಯಲಿಕ್ಕೆ ನಾನಾದೆ; ಬರಹ ಓದಿ, ಬುದ್ಧಿ ಕಲಿಯಲಿಕ್ಕೆ ನೀನಾದೆ. ಕಲ್ಲು ಬರಹ ಓದು" ಎಂದನು.

ಚೆನ್ನಯನು ಮೊಳಕಾಲು ಊರಿ, ಗಡಿಕಲ್ಲಿನ ಬರಹವನ್ನು ಓದಿ ಹೇಳಿ ದನು.

ಕೋಟಿಯು "ಹೌದು, ಚೆನ್ನಯ—ನೀನು ಓದಿದಂತೆ ಎಲ್ಲವೂ ಈಗ ನಡೆಯುತ್ತದೆ. ಮುಂಚಿನ ಕಾಲದಲ್ಲಿ ಎಣ್ಮೂರು ಬಲವಾಗಿತ್ತು, ಪಂಜದ

ಹಣಕಾಸೆಲ್ಲಾ ಎಣ್ಮೂರಿಗೆ ಹೋಗುತಿತ್ತು. ಈಗಿನ ಕಾಲದಲ್ಲಿ ಎಣ್ಮೂರು ಪಂಜದವರು ಜಗಿದು ಬಿಟ್ಟ ಕಬ್ಬಿನ ಸಿವುಡಿಯಂತಾಗಿದೆ. ಇಲ್ಲದಿದ್ದರೆ ಕಾಡಿನ ಆಚೆಗೆ ನೆಟ್ಟಿದ್ದ ಈ ಗಡಿಕಲ್ಲು ಈಚೆಗೆ ಬಂದು ಬೀಳುತಿತ್ತೇ" ಎಂದನು.

ಅದಕ್ಕೆ ಚೆನ್ನಯನು–"ಅದು ಮೊದಲಿದ್ದಲ್ಲೇ ಏಕೆ ಇರಬಾರದು?" ಎಂದು ಹೇಳಿ, ತನ್ನ ಎರಡು ಕೈಗಳಿಂದ ಅಲುಗಾಡಿಸಿ, ನಾಲ್ವರು ಹೊರಲಾರ ದಷ್ಟು ತೂಕವಾದ ಆ ಗಡಿಕಲ್ಲಿಗೆ ಬೆನ್ನು ಕೊಟ್ಟು, ಅದನ್ನು ಒಯ್ಯುತಿದ್ದನು.

ಅಷ್ಟರಲ್ಲಿ ಎಣ್ಮೂರಿಂದ ಪಂಜಕ್ಕಾಗಿ ನಾಲ್ಕು ಮಂದಿ ಆಳುಗಳೊಡನೆ ಆ ದಾರಿಯಾಗಿ ಹೋಗುತಿದ್ದ ಕಿನ್ನಿಚೆನ್ನಯನು ಕೋಟಿಯು ತಮ್ಮನ ಕೆಲ ಸವನ್ನು ಕಂಡು, ಅವರಿಬ್ಬರನ್ನು ಆಶ್ಚರ್ಯದಿಂದ ದೃಷ್ಟಿಸುತ್ತ ಅಲ್ಲಿಯೇ ನಿಂತುಬಿಟ್ಟನು. ಅವನ ಆಳುಗಳು ಅವನ ಹಿಂದೆಯೇ ತಡೆದರು.

ಕೋಟಿಯು ಗಡಿಯ ಕಲ್ಲನ್ನು ಹೊತ್ತುಕೊಂಡು ಹೋಗುವ ಚೆನ್ನಯ ನೊಡನೆ "ತಮ್ಮಾ, ಅಳುಕಬೇಡ, ತುಳುಕಬೇಡ" ಎಂದು ಸೂಚಿಸಿದನು.

ಕಿನ್ನಿಚೆನ್ನಯನು ಕೋಟಿಯೊಡನೆ "ಆತನು ನಿನ್ನ ತಮ್ಮನೊ? ಈ ಗಡಿಕಲ್ಲನ್ನು ಅವನು ಏತಕ್ಕೆ ಕಿತ್ತು ಬಿಟ್ಟನು?" ಎಂದು ಕೇಳಿದನು.

ಆ ಮಾತಿಗೆ ಕೋಟಿಯು ತನ್ನ ಕೈ ಬೆರಳಿನಿಂದ ಆ ಕಾಡಿನ ಆಚೆ ಕಡೆಯ ಗಡಿಯನ್ನು ತೋರಿಸಿ, "ಅಯ್ಯಾ, ಈ ಗಡಿಕಲ್ಲಿನ ಪೂರ್ವಸ್ಥಳವು ಕಾಡಿನ ಆಚೆಗಿದೆ. ನಾವು ಕಣ್ಣಾರೆ ಕಂಡಿದ್ದೇವೆ. ಪಂಜಕ್ಕೆ ಬಲವು ಬರು ತ್ತಲೇ ಈ ಕಲ್ಲು ಅಲ್ಲಿಂದ ಇಲ್ಲಿ ಹಾರಬೇಕೇ?" ಎಂದು ಹೇಳಿದನು.

ಇಷ್ಟರೊಳಗೆ ಚೆನ್ನಯನು ಕಲ್ಲನ್ನು ಮೊದಲಿದ್ದಲ್ಲಿ ನಿಲ್ಲಿಸಿ ಜಾಗ್ರತೆ ಯಾಗಿ ಬಂದು, "ಮತ್ತು ಈ ಕಲ್ಲು ಎಣ್ಮೂರಿನ ಜಾಗವನ್ನು ಕಿತ್ತು ತೆಗೆಯ ಬೇಕೇ? ಮುಂಚಿನ ರೀತಿರಿವಾಜು ಈಗಲೂ ನಡೆಯಲಿ!" ಎಂದು ಮುಗಿಸಿದನು.

ಅವರಿಬ್ಬರ ನಿಲುವು ಚೆಲುವುಗಳಿಂದ ಬೆರಗಾಗಿ, ಅವರ ನಡೆನುಡಿಗಳಿಂದ ಮರುಳಾಗಿ, ಮಾತಾಡುವುದಕ್ಕೆ ನಾಲಗೆ ಬಾರದೆ ದುರದುರನೆ ಅವರ ಮುಖ ವನ್ನೇ ನೋಡುತಿದ್ದ ಕಿನ್ನಿಚೆನ್ನಯನು ಅರೆಗಳಿಗೆಯ ಮೇಲೆ ಸ್ವಲ್ಪ ಧೈರ್ಯಗೊಂಡು, "ಬುದ್ಧಿ, ತಮ್ಮನ್ನುನೋಡಿದರೆ ತಾವು ಯಾರೋ ಮೇಲಿಂದ

ಭೂಮಿಗೆ ಬಂದ ಜನಗಳ ಹಾಗೆ ಕಾಣುತ್ತದೆ. ಆದರೆ ತಾವು ಯಾರು ಎಂದು ತಮ್ಮೊಂದಿಗೆ ಕೇಳುವುದಕ್ಕೆ ನಾಲಗೆಯು ಹೆದರಿ ತರತರಿಸುತ್ತದೆ—ನಿಜವಾಗಿಯೂ ತಾವು ಯಾರು ಎಂದು ಅಪ್ಪಣೆಯಾಗಲಿ" ಎಂದು ಕೈಮುಗಿದು ಕೇಳಿದನು.

ಚೆನ್ನಯನು ಕತ್ತಿಯ ಹಿಡಿಗೆ ಕೈಹಾಕಿದನು. ಕೋಟಿಯು "ಅಯ್ಯಾ, ಕಳ್ಳು ಕುಡಿದು ಮೈ ಹಾಳು ಮಾಡಬಾರದು; ಸುಳ್ಳು ನುಡಿದು ಬಾಯಿ ಹೊಲಸು ಮಾಡಬಾರದು. ನಾವು ಅವಳಿಜವಳಿ. ನಾನು ಕೋಟಿ--ಅಣ್ಣ. ಇವನು ಚೆನ್ನಯ—ತಮ್ಮ" ಎಂದು ಗಂಭೀರತೆಯಿಂದ ಹೇಳಿದನು.

ತತ್ಕ್ಷಣವೇ ಆ ಐವರು ಹಿಂದಕ್ಕೆ ಸರಿದು, ಬಾಯಲ್ಲಿ ಮಾತಿಲ್ಲದವರಾಗಿ, ಅಲ್ಲಿಯೇ ಕೈಕಟ್ಟಿ ನಿಂತುಕೊಂಡರು. ಅನಂತರ ಕಿನ್ನಿಚೆನ್ನಯನು "ಬುದ್ಧಿ, ಹುಡುಕಿದರೆ ದೊರೆಯದ ಮದ್ದುಬಳ್ಳಿ ಕಾಲಿಗೆ ತೊಡರಿದಂತಾಯಿತು; ಕಣ್ಣಿಗೆ ಕಾಣದ ಚಿನ್ನದ ಕೊಪ್ಪರಿಗೆ ಕೈಯಲ್ಲಿ ಬಂದು ಕುಳಿತಂತಾಯಿತು; ತಮ್ಮಿಬ್ಬರನ್ನು ನೋಡಬೇಕೆಂದು ಹೊರಟಿದ್ದ ನಮಗೆ ಇಲ್ಲಿಯೇ ತಮ್ಮ ದರ್ಶನವಾಯಿತು" ಎಂದು ಬಹಳ ವಿನಯದಿಂದ ಹೇಳಿಕೊಂಡನು.

ಕೋಟಿಯು "ನೀವು ಯಾರು" ಎಂದು ವಿಚಾರಿಸಿದನು.

ಉತ್ತರ-"ಬುದ್ಧಿ, ತಮಗೆ ಕೇಮುರಬಲ್ಲಾಳನಲ್ಲಿ ಆದ ಮರೆಮೋಸವನ್ನು ಕೇಳಿ, ತಮ್ಮನ್ನು ಸಂಧಿ ಮಧ್ಯಸ್ಥಿಕೆಯಿಂದ ಕರೆದುಕೊಂಡು ಬರಲು ಎಣ್ಮೂರು ಬಲ್ಲಾಳನಿಂದ ಆಜ್ಞಾಪಿಸಲ್ಪಟ್ಟ ಜನಗಳು ನಾವು ತಮ್ಮ ಸಮಾಚಾರವನ್ನು ಮೊದಲೇ ಕೇಳಿದ್ದೇವೆ."

ಪ್ರಶ್ನೆ—"ನಮ್ಮ ಸಂಗತಿಯನ್ನು ಯಾರು ಹೇಳಿದರು?"

ಉತ್ತರ—"ತಮ್ಮ ಸಾಕಣೆ ತಾಯಿ ಸಾಯಿನ ಬೈದಿತಿ"

ಪ್ರಶ್ನೆ—"ಅವಳು ಪಡುಮಲೆಯಲ್ಲಿ ಇದ್ದಾಳೆ. ಅವಳಿಂದ ಗೊತ್ತಾಗಲು ಸಾಧ್ಯವಿಲ್ಲವಷ್ಟೆ"!

ಉತ್ತರ—"ಸಾಯಿನ ಬೈದಿತಿಯು ಎಣ್ಮೂರನ್ನು ಸೇರಿಕೊಂಡು ಬಹುಕಾಲವಾಯಿತು. ಸಾಯುವ ಮುಂಚೆ ಅವಳು ನಿಮ್ಮನ್ನು ಒಂದು ಸಲ ಕಣ್ಣುತುಂಬ ನೋಡಬೇಕೆಂದು ಹಂಬಲಿಸುತ್ತಾಳೆ, ಬುದಿ."

ಪ್ರಶ್ನೆ — "ಅವಳು ಎಲ್ಲಿರುವಳು?"

ಉತ್ತರ— "ಅಯ್ಯನೂರು ಬೈಲಿನ ತಿಮ್ಮಣ್ಣ ಬೈದ್ಯನಲ್ಲಿ"

ಪ್ರಶ್ನೆ – "ಅವಳು ಆರೋಗ್ಯದಲ್ಲಿ ಇದ್ದಾಳೇ?"

ಉತ್ತರ— "ಮೂರು ದಿವಸಗಳ ಹಿಂದೆ ಅವಳ ಜೀವದಾಸೆ ಬಿಟ್ಟು ಬಾಯಿಗೆ ಹಾಲೆರೆದಿದ್ದರು, ನಿನ್ನೆ ಮೊನ್ನೆಯ ಸ್ಥಿತಿ ನನಗೆ ಗೊತ್ತಿಲ್ಲ, ಬುದ್ಧಿ!"

ಇಷ್ಟು ಮಾತುಕಥೆಯಾದನಂತರ ಕೋಟಿಚೆನ್ನಯರು ಬಂದವರ ಜತೆಯಲ್ಲಿ ಹೊರಟು ಸಂಜೆಗೆ ಮುಂಚಿತವಾಗಿ ಎಣ್ಮೂರಿಗೆ ಬಂದು, ತಿಮ್ಮಣ್ಣ ಬೈದ್ಯನ ಮನೆಯೊಳಕ್ಕೆ ಹೋದರು.

ಮನೆಯ ಚಾವಡಿಯ ಮೇಲೆ ಒಂದು ಹರಳೆಣ್ಣೆಯ ದೀಪವು ಮಿಣ ಮಿಣನೆ ಉರಿಯುತ್ತಲಿತ್ತು. ಅದರ ಒತ್ತಿನಲ್ಲಿ ಒಂದು ಕೋಣೆಯೊಳಗೆ ಸುಮಾರು ೬೦ ವರ್ಷ ವಯಸ್ಸು ದಾಟಿದ ಹೆಂಗಸೊಬ್ಬಳು ಒಂದು ಚಾಪೆಯ ಮೇಲೆ ಮಲಗಿದ್ದಳು. ಅವಳ ಮೈಯೆಲ್ಲಾ ಜ್ವರದಿಂದ ಬೆಂದು, ಕೆಮ್ಮಿನಿಂದ ಜಜ್ಜಿಹೋಗಿ, ಗರಿಯಂತೆ ಹಗುರವಾಗಿತ್ತು. ಕಿನ್ನಿಚೆನ್ನಯನು ಆ ಚಾಪೆಯ ಹತ್ತಿರ ಬಂದು ಕುಳಿತುಕೊಂಡು, "ಅಮ್ಮಾ, ಈ ಹೊತ್ತು ಹೇಗಿದೆ? ನಿನ್ನ ಮಕ್ಕಳು ಕೋಟಿಚೆನ್ನಯರು ಬಂದಿದ್ದಾರೆ, ನೋಡು" ಎಂದು ಹೇಳಿದನು.

ಆ ಎರಡು ಹೆಸರುಗಳನ್ನು ಕೇಳುತ್ತಲೆ ಅವಳ ಮುಚ್ಚಿದ ಕಣ್ಣು ಕೊಂಚ ತೆರೆಯಿತು; ಬಿಗಿದ ತುಟಿ ಅಲ್ಲಾಡಿತು. "ಓ ನನ್ನ ಬಾಲ" ಎಂಬ ಮಾತುಗಳು ಅಸ್ಪಷ್ಟವಾಗಿ ಬಾಯಿಂದ ಹೊರಟುವು.

ಆಗ ಕೋಟಿಯು ಮುದುಕಿಯ ತಲೆಯನ್ನು ತನ್ನ ಎಡ ತೊಡೆಯ ಮೇಲೆ ಇಟ್ಟು ಕುಳಿತುಕೊಂಡನು; ಚೆನ್ನಯನು ಅವಳ ಕಾಲುಗಳನ್ನು ಒತ್ತಲು ತೊಡಗಿದನು.

ಚೆನ್ನಯನು "ಅಮ್ಮಾ, ಸಾಯಿನ ಬೈದ್ಯರು ಎಲ್ಲಿದ್ದಾರೆ?" ಎಂದು ಕೇಳಿದನು.

ಅದಕ್ಕೆ ಕೋಟಿಯು "ಮಾತಾಡಿಸಬೇಡ; ಮಾತಾಡಿದರೆ ದಣುವಾಗುತ್ತದೆ" ಎಂದು ತಮ್ಮನಿಗೆ ಸೂಚಿಸಿದನು.

ಸಾಯಿನ ಬೈದಿತಿಯು ಬಹಳ ಪ್ರಯತ್ನಪಟ್ಟು, "ಮಕ್ಕಳೇ! ನನ್ನ ಕಡೆಗಾಲಕ್ಕೆ ನನಗೆ ಒದಗಿದಿರಿ! ಜಯಸಿರಿ ನಿಮ್ಮ ಭುಜದಲ್ಲಿ ನೆಲಸಲಿ! ನಿಮ್ಮ ಹೆಸರು ನಮ್ಮ ರಾಜ್ಯದಲ್ಲಿ ಉಳಿಯಲಿ!" ಎಂದು ಹೇಳಿ ಬಾಯಿ ತೆರೆದಳು.

ಅಲ್ಲಿ ಇದ್ದವರೆಲ್ಲರು ಅವಳ ಬಾಯಿಗೆ ಒಂದೊಂದು ತಟುಕು ಹಾಲು ಎರೆದರು. ಕೊನೆಗೆ ಕೋಟಿಚೆನ್ನಯರು ತುಳಸಿ ಎಲೆಯನ್ನೂ ಗಂಗೋದಕ ವನ್ನೂ ಅವಳ ಬಾಯಲ್ಲಿ ಇಟ್ಟು, ಅವಳಿಗೆ ನಮಸ್ಕರಿಸಿದರು. ಬೈದಿತಿಯು ಲೋಕಯಾತ್ರೆಯನ್ನು ಮುಗಿಸಿದಳು. ಅನಂತರ ಜಾತಿವಿಧಿಗೆ ಅನು ಸಾರವಾಗಿ ನಡೆಯ ತಕ್ಕ ಸಾವುಸೂತಕಗಳು ನಡೆದುವು.

ಇದಾದ ಕೆಲವು ದಿವಸಗಳ ತರುವಾಯ ಕಿನ್ನಿಚೆನ್ನಯನು ಎಣ್ಮೂರು ಬಲ್ಲಾಳನ ಓಲಗಕ್ಕೆ ಹೋದನು. ಬಲ್ಲಾಳನು ಅವನನ್ನು ಕಂಡು "ಬಾ, ಇಲ್ಲೇ ಮಣೆ ಇದೆ. ನಿನ್ನನ್ನು ಕಾಣದೆ ಹಲವು ದಿನಗಳಾದುವು, ಅಲ್ಲವೆ?" ಎಂದನು.

ಅದಕ್ಕೆ ಕಿನ್ನಿಚೆನ್ನಯನು "ಹೌದು, ಬುದ್ಧಿ. ಕೋಟಿಚೆನ್ನಯರ ಸಾಕಣೆ ತಾಯಿಯು ತೀರಿ ಹೋದುದರಿಂದ, ಅವರನ್ನು ತಮ್ಮ ದರ್ಶನಕ್ಕೆ ಕರೆದುಕೊಂಡು ಬರಲು ಇದು ವರೆಗೆ ಸಾಧ್ಯವಾಗಲಿಲ್ಲ" ಎಂದನು.

ಬಲ್ಲಾಳನು "ಹಾಗಾದರೆ, ನಾಳೆ ಮಧ್ಯಾಹ್ನದ ಓಲಗಕ್ಕೆ ಅವರನ್ನು ಕರೆದುಕೊಂಡು ಬಾ"ಎಂದು ಹೇಳಿ, "ಅವರಿಬ್ಬರು ಹೇಗೆ ಇದ್ದಾರೆ?" ಎಂದು ಕೇಳಿದನು.

ಕಿನ್ನಿಚೆನ್ನಯನು "ನಾನು ಏನು ಎನ್ನಲಿ, ಬುದ್ಧಿ? ಕಣ್ಣಿಗೆ ಚೆಲು ವರು, ಜನರಿಗೆ ಮರುಳರು, ಜನಿಸಿದವರಲ್ಲಿ ಇಲ್ಲ, ಇನ್ನು ಜನಿಸಲಿಕ್ಕಿಲ್ಲ. ಅವರಿದ್ದ ರಾಜ್ಯದಲ್ಲಿ ಒಂದು ಊರು ಉಳಿಸಬಹುದು, ಒಂದು ಊರು ಅಳಿಸಬಹುದು" ಎಂದು ಅವರನ್ನು ಕೊಂಡಾಡಿದನು.

"ಹಾಗಾದರೆ ಅವರನ್ನು ನಾಳೆ ನಡುಹಗಲ ಓಲಗಕ್ಕೆ ಕರೆದುಕೊಂಡು ಬಾ" ಎಂದು ಹೇಳಿ, ಬಲ್ಲಾಳನು ಒಳಕ್ಕೆ ಹೋದನು.

ಕಿನ್ನಿಚೆನ್ನಯನು ಬೀಡಿನಿಂದ ಇಳಿದು ಕೋಟಿಚೆನ್ನಯರಿದ್ದಲ್ಲಿಗೆ ಹೋಗಿ, ಮರುದಿನ ಬಲ್ಲಾಳರ ಓಲಗಕ್ಕೆ ಹೋಗುವುದಾಗಿ ನಿಶ್ಚಯ ಮಾಡಿದನು.

ಎಣ್ಮೂರಿನ ದೇವಬಲ್ಲಾಳನು ಪಡುಮಲೆಯ ಪೆರುಮಾಳ ಬಲ್ಲಾಳನಷ್ಟು ರಣಶೂರನೂ ಅಲ್ಲ, ಪಂಜದ ಕೇಮರ ಬಲ್ಲಾಳನಷ್ಟು ರಣಭೀರುವೂ ಅಲ್ಲ. ಆತನು ಪೆರುಮಾಳನಿಗಿಂತ ಸಾಧುವಾಗಿದ್ದನು, ಕೇಮರನಿಗಿಂತ ಬುದ್ಧಿವಂತನಾಗಿದ್ದನು. ಈ ಮೂವರಲ್ಲಿ ಅತ್ಯಧಿಕ ಧರ್ಮಬುದ್ಧಿಯು ಇವನಲ್ಲಿ ಇತ್ತು. ಆತನು ಅಧರ್ಮ, ದಾರಿದ್ರ್ಯ, ರೋಗ, ಅಂತಃಕಲಹ-ಇವೇ ಒಂದು ರಾಜ್ಯದ ತಿರುಳನ್ನು ತಿನ್ನುವ ಹುಳುಗಳೆಂದು ಆಗಾಗ ಹೇಳುತ್ತಿದ್ದನು. ಆತನ ಹೆಸರು ತುಳುದೇಶದ ಚೌಟ ಬಂಗರು ಮನೆತನಗಳಲ್ಲಿ ಮಾತ್ರವಲ್ಲ, ಇಕ್ಕೇರಿಯ ಅರಮನೆಯ ವರೆಗೆ ಹೋಗಿತ್ತು. ಎಂದಿನಿಂದ ಇಕ್ಕೇರಿಯವರು ಇವನ ಹೆಸರನ್ನು ಕೊಂಡಾಡಹತ್ತಿದರೊ ಅಂದಿನಿಂದ ಇವನ ನೆರೆಕರೆಯ ಬಲ್ಲಾಳರು ಇವನನ್ನು ಹಳಿದು, ಹೀಯಾಳಿಸಿ, ಹಗೆಮಾಡ ತೊಡಗಿದರು· ಹೀಗೆ ಹಗೆಮಾಡಿ ಇವನಿಗೆ ಹಾಳು ಬಗೆದವರಲ್ಲಿ ಕೇಮರ ಬಲ್ಲಾಳನೇ ಮೊದಲನೆಯವನು.

ಕೇಮರಬಲ್ಲಾಳನಿಗೆ ದೇವಬಲ್ಲಾಳನಲ್ಲಿದ್ದ ಹೊಟ್ಟೆಕಿಚ್ಚು ಆ ಚೆಂಡಿಗಡಿಯ ದುರಾಲೋಚನೆಯ ಗಾಳಿಯಿಂದ ಭುಗಿಲ್ಲೆಂದು ಹೊತ್ತಿತು. ಅವನು ತನಗೆ ಪಂಜದ ಪಟ್ಟವಾದ ಕೆಲವು ವರ್ಷಗಳಲ್ಲಿಯೇ ದೇವಬಲ್ಲಾಳನ ಸೀಮೆಯ ಎಲ್ಲೆಯಲ್ಲಿದ್ದ ಜನಗಳನ್ನು ಕಾಡತೊಡಗಿದನು. ಕೇಮರಬಲ್ಲಾಳನ ಉದ್ಧಟತನದ ಮುಂದೆ ದೇವಬಲ್ಲಾಳನ ಸಂಧಿಸಾಮಗಳು ನಡೆಯಲಿಲ್ಲ. ಬರಬರುತ್ತಾ ದೇವಬಲ್ಲಾಳನ ಸೀಮೆಯು ಮುಂಜಾನೆಯ ನೆರಳಂತೆ ಗಿಡ್ಡವಾಗುತ್ತ ಬಂತು, ಕೇಮರಬಲ್ಲಾಳನ ಸೀಮೆಯು ಸಂಜೆಯ ನೆರಳಂತೆ ಉದ್ದವಾಗುತ್ತ ಹೋಯಿತು. ತನ್ನ ಕೈಯಿಂದ ಅನ್ಯಾಯವಾಗಿ ಕಿತ್ತುಬಿಟ್ಟ ತನ್ನ ಸೀಮೆಯ ಭಾಗವನ್ನು ಪರಸಹಾಯದಿಂದಲಾದರೂ ವಶಮಾಡಿಕೊಳ್ಳಬೇಕೆಂದು ದೇವಬಲ್ಲಾಳನು ಸಮಯ ಕಾಯುತಿದ್ದನು. ಆ ಲೋಕೈಕ ವೀರರಾದ ಕೋಟಿಚೆನ್ನಯರ ಭುಜಬಲದಿಂದ ತನ್ನ ರಾಜ್ಯವು ಮರಳಿ ತಲೆ ಎತ್ತುವಂತೆ ಮಾಡಬೇಕೆಂದು ಬಗೆದು ಅವರನ್ನು ಸತ್ಕಾರ ಪೂರ್ವಕವಾಗಿ ಓಲಗದಲ್ಲಿ ಕಾಣುವುದಕ್ಕೆ ಆತನು ಎಲ್ಲವನ್ನು ಅಣಿ ಮಾಡಿದ್ದನು.

ಮರುದಿನ ಮಧ್ಯಾಹ್ನದಲ್ಲಿ ಕೋಟಿಚೆನ್ನಯರು ಎಣ್ಮೂರಿನ ಕಿನ್ನಿಚೆನ್ನಯನನ್ನು ಅನುಸರಿಸಿ, ತಾಯಿಯ ಸಂಗಾತದ ಮಕ್ಕಳಂತೆಯೂ, ಹೇಟೆಯ ಮಗ್ಗುಲಲ್ಲಿನ ಕೋಳಿ ಮರಿಗಳಂತೆಯೂ, ಸೂಜಿಯ ಹಿಂದುಗಡೆಯ ನೂಲೆಳೆಗಳಂತೆಯೂ ಬೀಡಿಗೆ ಹೋದರು. ಎಣ್ಮೂರು ಬಲ್ಲಾಳನು ಅವರನ್ನು ಸಕಲ ಸಂಭ್ರಮದಿಂದ ಕಂಡು, ಓಲಗಶಾಲೆಗೆ ಕರೆದುಕೊಂಡು ಬಂದು, ಯೋಗಕ್ಷೇಮವನ್ನು ವಿಚಾರಿಸಿ, ಅವರ ಪೂರ್ವ ವೃತ್ತಾಂತವನ್ನು ಕೇಳಿ, ತನ್ನ ರಾಜ್ಯದಲ್ಲಿ ಅವರು ಸುಖವಾಗಿ ಸಹಸ್ರಕಾಲ ಇರಬೇಕೆಂಬದಾಗಿ ಸೂಚಿಸಿದನು.

ಆಗ ಕಿನ್ನಿಚೆನ್ನಯನು "ಬುದ್ಧಿ, ನಮಗೆ ಬೇಕಾದವರು ಬೀಡಿನಿಂದ ದೂರವಾಗಿ ಇರಬಾರದಷ್ಟೆ. ಇಂಥ ಜಾಗವನ್ನೇ ಇವರಿಗೆ ಕೊಡಿಸಬೇಕೆಂಬುದಕ್ಕೆ ನನಗೆ ಅಪ್ಪಣೆಯಾಗಲಿ!"

ದೇವಬಲ್ಲಾಳನು "ಬಂಟರೇ, ನಿಮಗೆ ನಮ್ಮ ರಾಜ್ಯದಲ್ಲಿ ಯಾವ ಸ್ಥಳ ಬೇಕು? ಬಿಲ್ಲರ ನಟ್ಟಿಲ್ಲು ಆದೀತೇ?" ಎಂದು ಕೇಳಿದನು.

ಕೋಟಿ—"ಬುದ್ಧಿ, ಅದನ್ನು ಕೊಟ್ಟರೆ ಜಾತಿಗೆ ಜಾತಿ ಹಗೆ ಎಂಬಂತೆ ನಮ್ಮವರ ವಿರೋಧವೇ ನಮಗೆ ಬರಬಹುದು."

ದೇವಬಲ್ಲಾಳ—"ಒಕ್ಕಲಿಗನ ಗುತ್ತುಬಾಳಿಕೆ ಕೊಟ್ಟರೆ—"

ಕೋಟಿ—"ನಾಯಿಗೂ ಬೆಕ್ಕಿಗೂ ಇದ್ದ ವೈರದಂತೆ"

ದೇವಬಲ್ಲಾಳ—"ಬ್ರಾಹ್ಮಣರ ಬೆರಂಪಳ್ಳಿ ಕೊಡುತ್ತೇನೆ, ಆಗದೋ?"

ಕೋಟಿ—"ಆಗಲಿಕ್ಕೆ ಆಗಬಹುದು. ಅದನ್ನು ತೆಗೆದುಕೊಂಡರೆ ನಾಗರ ಹಾವಿಗೂ ಕನ್ನಡಿ ಹಾವಿಗೂ ಒಂದೇ ಬಿಲದಲ್ಲಿ ಇಟ್ಟಂತಾದೀತು."

ದೇವ ಬಲ್ಲಾಳ—"ಹಾಗಾದರೆ, ನೀವೇ ಒಂದನ್ನು ಆಯ್ದುಕೊಳ್ಳಿ"

ತತ್‌ಕ್ಷಣವೇ ಚೆನ್ನಯನು "ಅಣ್ಣಾ, ಪಡುಮಲೆಯ ಜೋಯಿಸರು ಹೇಳಿದ್ದು ನನಗೆ ನೆನಪಿದೆ. ಆ ಐನೂರು ಬೈಲು ಇಲ್ಲೇ ಅಲ್ಲವೇ?" ಎಂದನು.

ಕೋಟಿಯು ಆ ಮಾತನ್ನು ಕೇಳಿ "ಬುದ್ಧಿ, ಐನೂರು ಗುತ್ತನ್ನು ಕರುಣಿಸಿರಿ" ಎಂದನು.

ಅದಕ್ಕೆ ದೇವ ಬಲ್ಲಾಳನು "ಅದು ಒಕ್ಕಲಿಲ್ಲದ ಗುತ್ತು. ಅಷ್ಟೇ ಅಲ್ಲ, ಆ ಗುತ್ತು ತನ್ನ ಸೀಮೆಗೆ ಸೇರಿದ್ದೆಂದು ಪಂಜದ ಕೇಮರ ಬಲ್ಲಾಳನು ಸುಳ್ಳು ಸಾಧನೆ ಮಾಡಿ, ನಮ್ಮ ಹಳೆಯ ಗಡಿಕಲ್ಲುಗಳನ್ನು ಕಿತ್ತು ಹಾಕಿಸಿ, ಗುತ್ತಿನಲ್ಲಿ ಹೊಗೆ ಏಳುವುದಕ್ಕೆ ಬಿಡುವುದಿಲ್ಲ. ಇದು ನನಗೆ ಗೊತ್ತಿದ್ದು, ನಿಮ್ಮನ್ನು ಮೊದಲೇ ಜಗಳದ ಮಣೆಯ ಮೇಲೆ ಏತಕ್ಕೆ ಕೂರಿಸಬೇಕು?" ಎಂದು ಹೇಳಿದನು.

ಗಡಿಕಲ್ಲುಗಳನ್ನು ಕಿತ್ತ ಮಾತು ಬರುತ್ತಲೆ ಕೋಟಿ ಚೆನ್ನಯರು ಒಬ್ಬರು ಮತ್ತೊಬ್ಬರ ಮುಖವನ್ನು ನೋಡಿದರು. ಚೆನ್ನಯನು "ಬುದ್ಧಿ, ನಾವು ನಿಮ್ಮ ರಾಜ್ಯದಲ್ಲಿ ಕಾಲಿಡುವಾಗಲೇ ಆ ಜಗಳದ ಮಣೆಯನ್ನು ಮೆಟ್ಟಿ ಬಂದಿದ್ದೇವೆ. ನಾನು ಆ ಗಡಿಕಲ್ಲನ್ನು ಮುಂಚಿನ ಸ್ಥಳದಲ್ಲಿ ಹೊತ್ತು ಹಾಕಿ, ನಿಮ್ಮ ರಾಜ್ಯಕ್ಕೆ ೫೦ ಮೂರು ಜಾಗವನ್ನು ಕೂಡಿಸಿದ್ದೇನೆ. ಅಯ್ಯ ನೂರು ಗುತ್ತನ್ನು ನಮಗೆ ದಯೆಪಾಲಿಸಿ ಬಿಡಿ. ಜಗಳಕ್ಕೆ ಬರುವವರು ಬರಲಿ, ನಾವು ನೋಡಿಕೊಳ್ಳುತ್ತೇವೆ" ಎಂದನು.

ದೇವ ಬಲ್ಲಾಳನು "ಹಾಗಾದರೆ ಇನ್ನು ಜಗಳ ತಪ್ಪದು" ಎಂದನು.

ಕೋಟಿ "ಜಗವು ಇರುವಷ್ಟು ಕಾಲ ಜಗಳವು ಇದೆ, ಬುದ್ಧಿ" ಎಂದನು.

ದೇವ ಬಲ್ಲಾಳನು "ಆ ಗುತ್ತು ನಿಮಗೆ ಮೆಚ್ಚಿಗೆಯಾಗಿದ್ದರೆ ನನ್ನ ಅಡ್ಡಿ ಇಲ್ಲ. ಅದನ್ನು ನೀನು ಸಹಸ್ರ ಕಾಲಾವಧಿ ಅನುಭವಿಸಿಕೊಂಡು ಬಂದು, ಬೀಡಿನ ಮರ್ಯಾದೆಯನ್ನು ಕಾಪಾಡುವಂಥವರಾಗಬೇಕು" ಎಂದು ಹೇಳಿ, ಕೈವೀಳ್ಯವನ್ನು ಕೊಟ್ಟನು.

ಅದನ್ನು ಸ್ವೀಕರಿಸಿ ಕೋಟಿ ಚೆನ್ನಯರು ಎಣ್ಮೂರು ಬಲ್ಲಾಳನ ವಶವರ್ತಿಯಾಗಿದ್ದು, ಅಯ್ಯನೂರು ಗುತ್ತನ್ನು ಮಾಡಿಕೊಂಡು ಸುಖವಾಗಿದ್ದರು.

ಕೋಟಿ ಚೆನ್ನಯರನ್ನು ಹಿಡಿಯಲಿಕ್ಕೆ ಚೆಂದುಗಿಡಿಯೂ ಕೇಮರನೂ ಮಾಡಿದ ಮೋಸ, ಅವರು ಸೆರೆಯಿಂದ ತಪ್ಪಿಸಿಕೊಳ್ಳಲು ಮಾಡಿದ ಉಪಾಯ, ಅವರನ್ನು ಎಣ್ಮೂರಲ್ಲಿ ಕಂಡ ಸಂಗತಿ, ಅಲ್ಲಿ ಅವರಿಗೆ ದೊರೆತ ಆಶ್ರಯ, ಅವರ ಸಹಾಯದಿಂದ ಎಣ್ಮೂರು ಬಲ್ಲಾಳನು ತನ್ನ ರಾಜ್ಯವಿಸ್ತಾರಕ್ಕಾಗಿ ಮಾಡುವ ಹಂಚಿಕೆ—ಇವುಗಳ ಸುದ್ದಿಯು ಪಂಜ ಸೀಮೆಯಲ್ಲಿಯೂ

ಪಡುಮಲೆ ಸೀಮೆಯಲ್ಲಿ ಹಬ್ಬುವುದಕ್ಕೆ ಬಹು ಕಾಲ ಹೋಗಲಿಲ್ಲ. ಒಬ್ಬ ಬಲ್ಲಾಳನು ಸಿಟ್ಟಿನಿಂದ ತನ್ನ ಊರಲ್ಲಿದ್ದ ಕಿನ್ನಿದಾರುವನ್ನೂ ಅವಳ ಗಂಡನನ್ನೂ ಬಹಳವಾಗಿ ಕಾಡಿದನು; ಇನ್ನೊಬ್ಬ ಬಲ್ಲಾಳನು ತನ್ನ ಬೀಡಿನಲ್ಲಿದ್ದ ಮುದುಕ ಸಾಯಿನ ಬೈದ್ಯನನ್ನು ಉಪದ್ರವಿಸಿದನು. ಇಬ್ಬರ ಕೋಪವು ಇಷ್ಟರಲ್ಲೇ ಮುಗಿಯಲಿಲ್ಲ. ಅವರು ಕೋಟಿಚೆನ್ನಯರನ್ನು ಕಂಡಲ್ಲಿ ಹಿಡಿದು ಕಡಿದು ಹಾಕ ಬೇಕೆಂಬದಾಗಿ ಅಪ್ಪಣೆ ಕೊಟ್ಟು, ಆಗಾಗ ತಮ್ಮ ಕಡೆಯ ಜನಗಳನ್ನು ಎಣ್ಮೂರಿಗೆ ಗುಟ್ಟಿನಿಂದ ಕಳುಹಿಸಿದರು; ವಿಷದ ಹಾಲಿನಿಂದ ಅವರನ್ನು ಕೊಲ್ಲಬೇಕೆಂದು ಗೊಲ್ಲರ ಮೂಲಕವಾಗಿ ದುರಾಲೋಚನೆ ನಡಿಸಿದರು; ಅವರ ಬಿತ್ತವುಳಿಯದಂತೆ ಮಾಡಬೇಕೆಂದು ಕಣಿಯರಿಂದ ಬಗೆಬಗೆಯ ಮದ್ದುಮಾಟಗಳನ್ನು ಮಾಡಿಸಿದರು. ಏನು ಮಾಡಿದರೂ ಕೋಟಿಚೆನ್ನಯರ ತಲೆಕೂದಲು ಉದುರಲಿಲ್ಲ.

ಜೋಡಿ ಹುಲಿಗಳ ಬಾಯಿಂದ ತಪ್ಪಿಸಿಕೊಂಡು ಸುರಕ್ಷಿತವಾದ ಹಸುರು ಹುಲ್ಲುಗಾವಲಿಗೆ ಹೋಗಿ, ಕುಣಿದು ಮೇಯುವ ಹುಲ್ಲೆಯ ಮರಿಗಳನ್ನು ಕಂಡು ಆರ್ಭಟಿಸುವ ದುಷ್ಟ ವ್ಯಾಘ್ರಗಳಂತೆ ಆ ಇಬ್ಬರು ಬಲ್ಲಾಳರು ಚೆನ್ನಕೋಟಿಯರನ್ನು ಹುಟ್ಟಡಗಿಸಬೇಕೆಂದು ಮನಸ್ಸಿನಲ್ಲಿ ದೃಢ ಮಾಡಿಕೊಂಡರು. ಈ ಮಧ್ಯದಲ್ಲಿ ಚೆನ್ನಯನು ಗಡಿಕಲ್ಲುಗಳನ್ನು ಒಂದು ಕಡೆಯಿಂದ ಕಿತ್ತು ಇನ್ನೊಂದು ಕಡೆಯಲ್ಲಿ ನೆಟ್ಟದ್ದು, ಅಯ್ಯನೂರು ಗುತ್ತನ್ನು ವಿಸ್ತರಿಸಿದ್ದು, ಅವರಿಬ್ಬರು ಪಂಜಸೀಮೆಗೆ ಸೇರಿದ್ದ ಬಂಟಮಲೆಯಲ್ಲಿ ಹೇಳದೆ ಕೇಳದೆ ಆಗಾಗ ಬೇಟೆಯಾಡಿದ್ದು, ಸರ್ವರ ಹೃದಯದಲ್ಲಿ ಅವರಿಂದ ಒಂದು ಬಗೆಯ ಭೀತಿ ಹುಟ್ಟಿದ್ದು—ಇವುಗಳ ಸಮಾಚಾರವನ್ನು ಕೇಳಿ, ಪಡುಮಲೆಯ ಪೆರುಮಾಳನೂ ಪಂಜದ ಕೇಮರನೂ ಅವರನ್ನು ನೆಲಸಮಮಾಡುವ ಆಲೋಚನೆಯಿಂದ ಜನಗಳನ್ನು ಕೂಡಿಸುತ್ತ, ಮುಸ್ತೈದೆಯನ್ನು ಒದಗಿಸುತ್ತ, ತಕ್ಕ ವೇಳೆಯನ್ನು ಎದುರು ನೋಡುತ್ತ ಇದ್ದರು.

ಬೇಡುವ ಬಡವನು ಕೊಡುಗೈಯಾಗಿರುವ ಧೊರೆಗೆ ಬೇಕಾದವನಾಗುತ್ತಲೇ ಚಾಡಿಯ ಬಾಯಿ ತುರಿಸಹತ್ತುತ್ತದೆ. ಕೋಟಿಚೆನ್ನಯರು ಎಣ್ಮೂರು ಬಲ್ಲಾಳನ ಪ್ರೀತಿಗೆ ಪಾತ್ರರಾಗಿ ಅವನ ಬೀಡಿನಲ್ಲಿ ಪ್ರಬಲರಾದುದನ್ನು ಕಂಡು

ಚಾಡಿಗಾರರು ಬಲ್ಲಾಳನನ್ನು ಅವರ ಮೇಲೆ ತಿರುಗಿಸುವುದಕ್ಕೆ ತೊಡಗಿದರು. 'ಅರಸರ ಕಿವಿಗೆ ತರಲೆ ಹಾಳು, ಬಾಗಿಲ ಕಿವಿಗೆ ಒರಲೆ ಹಾಳು' ಎಂಬ ಗಾದೆಗೆ ಸರಿಯಾಗಿ, ಬಲ್ಲಾಳನು ಆ ಚಾಡಿಗಾರರ ಮಾತಿಗೆ ಕಿವಿಗೊಡ ಹತ್ತಿದನು. ಅವನು ಕಿವಿಗೊಡುವಷ್ಟಕ್ಕೆ ಚಾಡಿ ಹೆಚ್ಚುತ್ತ ಹೋಯಿತು.

ಈ ಚಾಡಿಗಾರರಲ್ಲಿ ಒಬ್ಬನು ಒಂದು ದಿನ ಬಲ್ಲಾಳನ ಹತ್ತಿರ ಯಾರೂ ಇಲ್ಲದ್ದನ್ನು ಕಂಡು, "ಬುದ್ಧಿ! ಮನೆಯಲ್ಲಿ ಬೇಸರವೆಂದು ಇಲ್ಲಿ ಬಂದೆ—ಇಲ್ಲಿಯೂ ನಮ್ಮ ಹೊಸ ಬಂಟರು ಹೇಳುವಂತೆ ಬೇಸರಿಕೆ" ಎಂದನು.

ಆಗ ಎಣ್ಮೂರು ಬಲ್ಲಾಳನು ಕಿವಿಗಳನ್ನು ಚೆನ್ನಾಗಿ ತೆರೆದು, "ಹೊಸ ಬಂಟರು ಏನೆನ್ನುತ್ತಾರೆ?" ಎಂದು ಕೇಳಿದನು.

"ನಮ್ಮ ಸೀಮೆಗೆ ಹೊಸಬರಾದವರಿಗೆ ಇಲ್ಲಿ ಬೇಸರವಾಗುವುದೇನೋ ಸಹಜ" ಎಂದು ಚಾಡಿಗಾರನು ಮೇಲಿನ ಮೇಲೆ ಹೇಳಿದನು.

"ನೀನು ಅಳುಕಬೇಡ. ಎಲ್ಲವನ್ನೂ ಬಿಚ್ಚಿ ಹೇಳು" ಎಂದು ಬಲ್ಲಾಳನು ಹುಬ್ಬೆತ್ತಿ ಕೇಳಿದನು.

ಚಾಡಿಗಾರ—"ಬುದ್ಧಿ, ಇದು ಬಡ ರಾಜ್ಯವಂತೆ, ನೀವು ಬಡ ಬಲ್ಲಾಳರಂತೆ. ಹೀಗೆ ಕಲೆ ಹೇಳಿ ಹೊಸ ಬಂಟರು ಕುಲ ದೂಷಿಸುತ್ತಾರೆ, ಬುದ್ಧಿ."

ಬಲ್ಲಾಳನು ಇನ್ನು ಹೆಚ್ಚು ಕೇಳುವುದಕ್ಕೆ ಮನಸ್ಸಿಲ್ಲದೆ ಕೋಟಿ ಚೆನ್ನಯರನ್ನು ಕರೆತರಿಸಿ, ಚಾಡಿಗಾರನ ಇದಿರಿನಲ್ಲಿ ಅವರನ್ನು ವಿಚಾರಿಸಿದನು.

ಆಗ ಚೆನ್ನಯನು ಕೈಮುಗಿದು, "ಬುದ್ಧಿ! ಇದು ಯಾವುದೂ ನನ್ನ ಅಣ್ಣನಿಗೆ ಗೊತ್ತಿಲ್ಲ. ಮಾತಾಡಿದ್ದು ನಾನು. ನಾನು ನಿಮ್ಮ ಕುಲವನ್ನು ದೂಷಿಸಿಲ್ಲವೆಂದು ಖಂಡಿತವಾಗಿ ಹೇಳುವೆನು. ನನ್ನ ಮಾತುಗಳನ್ನು ನಾನೇ ಹೇಳಿಬಿಡುತ್ತೇನೆ, ಬುದ್ಧಿ! ಮೊನ್ನೆ ಸಂಕಲೆ ಕಡಿದು ಜನಗಳನ್ನು ಹರಹುತಿದ್ದ ಅರಮನೆಯ ಸೊಕ್ಕಾನೆಯನ್ನು ನಾವಿಬ್ಬರು ಹಿಡಿದು ತಂದು, ಲಾಯದಲ್ಲಿ ಕಟ್ಟಿದೆವಷ್ಟೆ. ಆ ದಿನ ನಮಗೆ ಹಿಡಿಯಲಾರದಷ್ಟು ಸಂತೋಷವಾಯಿತು. ಇಂಥ ಸಾಹಸವಿದ್ದರೆ ಉಂಡ ಅನ್ನ ನಮಗೆ ಅರಗುತ್ತದೆ. ನಾವು ಈ ರಾಜ್ಯಕ್ಕೆ ಬಂದು ಎರಡು ಮೂರು ವರುಷಗಳಾದರೂ, ಬಡವರಾದ ನಮ್ಮಿಂದ ಯಾವ ತರದ ಪೌರುಷವೂ ಬೇಡಿಗೆ

ಆಗಲಿಲ್ಲ. ಹಂದಿಯ ನವಿರು, ಹುಲಿಯ ಉಗುರು, ಆನೆಯ ದಂತ ಇವನ್ನು ತಂದು ಕಾಣಿಕೆ ಕೊಡೋಣ ಎಂದರೆ ತುಪ್ಪೆಕಲ್ಲಿನ ಕಾಡಿನಲ್ಲಿ ಕಾಲಿಡಲು ನಮಗೆ ಅಪ್ಪಣೆ ಇಲ್ಲ; ಕೊಳುಗುಳಕ್ಕೆ ಹೋಗಿ ಹಗೆಗಳನ್ನು ಚೆಂಡಾಡಿ ಅವರ ತಲೆಗಳನ್ನು ನಿಮ್ಮ ಪಾದಕ್ಕೆ ಒಪ್ಪಿಸೋಣ ಎಂದರೆ ನಮಗೆ ರಣವೀಳ್ಯವನ್ನು ಕೊಟ್ಟಿಲ್ಲ. ಹೀಗೆ ನಮಗೆ ಉಂಡ ಉಣಿಸು ಕುತ್ತ ವಾಗಿದೆ, ಕುಡಿದ ನೀರು ಪಿತ್ತವಾಗಿದೆ. ಉಟ್ಟ ಬಟ್ಟೆ ಕೊಳೆಯುಲಿಲ್ಲ, ಹಿಡಿದ ಕತ್ತಿ ಮಾಸಲಿಲ್ಲ. ಈ ಮಾತು ದೂಷಣೆಯಾದರೆ ಈ ಕತ್ತಿ ಇದೆ, ನನ್ನ ಕೊರಳೂ ಇದೆ" ಎಂದು ಹೇಳಿ ಬಲ್ಲಾಳನ ಮುಂದುಗಡೆ ಕತ್ತನ್ನು ಬಾಗಿಸಿ ನಿಂತನು.

ದೇವ ಬಲ್ಲಾಳನು ಚೆನ್ನಯನ ವಚನಗಳನ್ನು ಕೇಳಿ ತಟಸ್ಥನಾಗಿ "ಹೌದು ಬಂಟರೇ, ನಮ್ಮ ರಾಜ್ಯದಲ್ಲಿ ಬೇಟೆಗೀಟೆ, ಆಯನ ಆರಾಟ ಇರ ಬೇಕು. ಇವುಗಳ ಮೂಲಕ ಜನಗಳಲ್ಲಿ ಮೈಬಲವು ಬರುತ್ತದೆ; ಸಂಘಶಕ್ತಿಯು ಬೆಳೆಯುತ್ತದೆ. ಆದರೆ ತುಪ್ಪೆಕಲ್ಲು ಕಾಡಿನಲ್ಲಿ ಬೇಟೆಯಾಡಿದರೆ ನಾವು ಪಂಜದವರನ್ನು ಕೊಳುಗುಳಕ್ಕೆ ಕೂಗಿಕರೆದಂತಾಗುವುದು. ಅದ ಕ್ಕಾಗಿಯೇ ಹಿಂದೆ ಸರಿಯುತ್ತೇವೆ, ಬಂಟರೇ" ಎಂದನು.

ಆಗ ಚೆನ್ನಯನು "ಬುದ್ಧಿ, ಕಾಡು ಮೃಗಗಳ ಬಾಧೆಯಿಂದ ಜನಗಳನ್ನು ತಪ್ಪಿಸುವುದು ನಮ್ಮ ಕಾರ್ಯ. ಆ ಕಾರ್ಯಸಾಧನೆಯಲ್ಲಿ ಯಾವ ತೊಂದರೆ ಬಂದರೂ ಹಿಮ್ಮೆಟ್ಟಲಾಗದು" ಎಂದನು.

"ಹಾಗಾದರೆ ತುಪ್ಪೆಕಲ್ಲಡವಿಯ ಬೇಟೆ ಆಗಲಿ" ಎಂದು ಬಲ್ಲಾಳನು ಅಪ್ಪಣೆ ಕೊಡಿಸಿ, "ಚೆನ್ನಯ, ಈ ಚಾಡಿಗಾರನನ್ನು ಏನು ಮಾಡಬೇಕು? ಇವನಿಗೆ ತಕ್ಕ ಶಿಕ್ಷೆಯಾವುದು?" ಎಂದು ಕೇಳಿದನು.

ಆಗ ಚೆನ್ನಯನು "ಬುದ್ಧಿ, ಅವನಲ್ಲಿ ನನ್ನ ಕತ್ತಿ ನನೆಯುವಷ್ಟು ರಕ್ತವಿಲ್ಲ, ಕೊತ್ತಿ ತಿನ್ನುವಷ್ಟು ಮಾಂಸವಿಲ್ಲ, ಅವನನ್ನು ಬಿಟ್ಟುಬಿಡಿ" ಎಂದನು.

ಮೇಲಿನ ಸಂಭಾಷಣೆಯಾದ ಕೆಲವು ದಿನಗಳಲ್ಲಿಯೇ ಓಲೆಗಳನ್ನು ಬರಿಸಿ ಬೇಟೆಗೆ ಬೇಕಾದ ಸನ್ನಾಹಕ್ಕಾಗಿ ಕಡಲ ಬಳಿಯ ಚೊಕ್ಕ ಪಟ್ಟಣದಿಂದ ಬಗೆಬಗೆಯ ಬಲೆಗಳನ್ನು ತರಿಸಿದ್ದಾಯಿತು; ಗಟ್ಟದ ಮೇಲಿಂದ

ನಾನಾ ಜಾತಿಯ ಬೇಟೆನಾಯಿಗಳನ್ನು ಒದಗಿಸಿಕೊಂಡದ್ದಾಯಿತ್ತು, ತರುವಾಯ ಒಂದು ದಿನ ಬೆಳಗ್ಗೆ ಜನಗಳ ಗುಂಪೊಂದು ಬಿಲ್ಲು ಬಾಣಗಳನ್ನೂ ಕತ್ತಿ ಈಟಿಗಳನ್ನೂ ಕೊಂಬುಕಹಳೆಗಳನ್ನೂ ಹಿಡಿದುಕೊಂಡು, ನಾಯಿಗಳ ಸಮೇತ ತುಪ್ಪೆಕಲ್ಲು ಕಾಡನ್ನು ನುಗ್ಗಿತು.

ಆ ಬೇಟೆಗಾರರು ಬಹಳ ಹೊತ್ತಿನ ತನಕ ಕಾಡು ಎಬ್ಬಿದರೂ ಬೂದುಗಣ್ಣಿನ ಮೊಲ, ಪಚ್ಚೆಕಾಲಿನ ಜಿಂಕೆ, ಕೊಬ್ಬಿದ ಹಂದಿ, ಕುಟುರುವ ಕುಡುಮುಲು ಹಕ್ಕಿ—ಯಾವುದೊಂದೂ ಏಳಲಿಲ್ಲ. ತರುವಾಯ ಅವರು ಬಲ್ಲೆ ಇದ್ದಲ್ಲಿ ಕಲ್ಲು, ಕಂಡಿ ಇದ್ದಲ್ಲಿ ಜನ, ಮೈದಾನು ಇದ್ದಲ್ಲಿ ನಾಯಿ—ಹೀಗೆ ಮೇಳೈಸಿಕೊಂಡು ಕಾಡಿಗೆ ಮುತ್ತಿಗೆ ಹಾಕಿದರು. ಸುಮಾರು ಎರಡು ತಾಸುಗಳ ವರೆಗೆ ಸುಮ್ಮನೆ ಕಾದು ನಿಂತರು. ಯಾವುದೊಂದಾದರೂ ನೆಲದ ಮೇಲೆ ಓಡಿದಂತೆ, ಇಲ್ಲವೆ ಮರದ ಮೇಲೆ ಹರಿದಂತೆ, ಇಲ್ಲವೆ ಆಕಾಶದಲ್ಲಿ ಹಾರಿದಂತೆ ತೋರಲಿಲ್ಲ. ಅನಂತರ ಒಂದು ಕಡೆಯಲ್ಲಿ ನೆಲಹಿಡಿದು ಎಲೆಯ ವರೆಗೆ ಏಬ್ಬುವಾಗ ಆಳುದ್ದ ಕಪ್ಪು ತೋರಿತು. 'ಆನೆಗೆ ಕಿರಿದು, ಕುದುರೆಗೆ ಹಿರಿದು' ಎಂದು ಒಬ್ಬನು ಮರಗಳ ಹಿಂದಿನಿಂದ ಮತ್ತೊಬ್ಬನಿಗೆ ಕೈಸನ್ನೆ ಮಾಡಿದನು. ಒಡನೆ ಅದು ದಡಕ್ಕೆಂದು ಎದ್ದು, ಡುರುಂಕ್ಕೆಂದು ಕೂಗಿ, ಮುಸುಡು ಆಡಿಸಿದ್ದನ್ನು ಕಂಡು ಚೆನ್ನಯನು "ಇದಿರಿಗೆ ಬಂದದ್ದು ಎಂಥಾದ್ದು, ಕೋಟಿ ?" ಎಂದು ಕೇಳಿದನು.

ಅಷ್ಟರಲ್ಲಿ ಆ ಕಾಡುಹಂದಿಯು ನವಿರುಗಳನ್ನು ನಿಗುರಿಸಿ, ಮಳೆಗಾಲದ ಗುಡುಗಿನಂತೆ ಮೊರೆಯುತ್ತ, ಮಿಂಚಿನಂತೆ ತನ್ನ ಕೋರೆ ಹಲ್ಲುಗಳನ್ನು ಜಳಪಿಸುತ್ತ, ಗಾಳಿಯ ವೇಗದಿಂದ ಕೋಟಿಗೆ ಎದುರಾಗಿ ಬರುತಿತ್ತು. "ಓಡೋಣವೇ ಬಂಟರ ಮಾನದ ಮೇಲೆ ಬರುತ್ತದೆ, ನಿಲ್ಲೋಣವೇ ಪ್ರಾಣದ ಮೇಲೆ ಬರುತ್ತದೆ"—ಈ ಪ್ರಕಾರವಾಗಿ ಕೋಟಿಯ ಮನಸ್ಸು ತೂಗುತ್ತಲಿತ್ತು. ಅರೆನಿಮಿಷದಲ್ಲಿ ಅವನ ಬಲಗೈಯ ಬಾಣವು ಎಡಗೈಯ ಬಿಲ್ಲನ್ನು ಬಿಟ್ಟು ಹಾರಿ, ಹಂದಿಯ ಮುಖದಲ್ಲಿ ಮುರುಟಿಕೊಂಡು ತಿಕದಲ್ಲಿ ಹೊರಟಿತು. ಹಂದಿಯ ಒಳಳಾಟವು ನಾಕಲೋಕಕ್ಕೆ ಮುಟ್ಟಿತು; ಹೊರಳಾಟವು ನಾಗಲೋಕಕ್ಕೆ ಹೋಯಿತು. 'ಹಂದಿಯನ್ನು ಅಣ್ಣನು ಕೊಂದನೊ, ಅಣ್ಣನನ್ನು ಹಂದಿ ಕೊಂದಿತೊ' ಎಂಬ ಅನುಮಾನದಿಂದ

ಚೆನ್ನಯನು ಮುಂದೋಡಿ ಬಂದು ಕೇಳಿದನು. ಕೋಟಿಯು ತನ್ನ ಕೈಬೆರಳಿಂದ ತೋರಿಸಿದನು. ಹುಲ್ಲು ಎಲೆಗಳ ರಾಶಿಯ ಮೇಲೆ ಆನೆಮರಿಯಂತೆ ಭಯಂಕರವಾಗಿ ಬಿದ್ದಿದ್ದ ದೊಡ್ಡ ಕಾಡುಹಂದಿಯನ್ನು ಚೆನ್ನಯನು ತನ್ನ ಎಡಗಾಲಿಂದ ಮೆಟ್ಟಿದನು. ಆ ಹಂದಿಯು ಮುಚ್ಚಿದ್ದ ಕಣ್ಣನ್ನು ಅರೆತೆರೆದು, ಬಾಲವನ್ನು ಪಿಟ್ಟನೆ ಅಲುಗಿಸಿ, ಮೈ ಕೊಡಹಿ, ಅರೆನಿಮಿಷದಲ್ಲಿ ಎದ್ದೋಡಿತು. ಚೆನ್ನಯನು ಅದನ್ನು ಬೆನ್ನಟ್ಟಿಕೊಂಡು ಹೋದನು. ಅವನ ಹಿಂದುಗಡೆ ಉಳಿದವರೆಲ್ಲರು ಓಡ ತೊಡಗಿದರು.

ಹಂದಿಯು ಓಡುತ್ತ ಓಡುತ್ತ ತುಪ್ಪೆಕಲ್ಲ ಮಲೆಯನ್ನು ದಾಟಿ, ಪಂಜ ಸೀಮೆಯ ಅಡ್ಡಕ್ಕೆ ಹೋಗಿ, ಫಕ್ಕನೆ ತಿರುಗಿ, ಚೆನ್ನಯನಿಗೆ ಇದಿರಾಗಿ ಬಂತು. ಚೆನ್ನಯನು ತನ್ನ ಉರವಣೆಯನ್ನು ನಿಲ್ಲಿಸಿ, ಕಣ್ಣುಮುಚ್ಚುವಷ್ಟರಲ್ಲಿ ತನ್ನ ಎರಡು ಕತ್ತಿಗಳನ್ನು ಮುಂದಕ್ಕೆ ಹಿಡಿದು, ಹಂದಿಗೆ ಮುಖವಾಗಿ ನಿಂತನು. ಹಾಯ್ದುಬರುವ ಹಂದಿಯ ಎರಡು ಪಕ್ಕಗಳು ಚೆನ್ನಯನು ಒತ್ತಿಹಿಡಿದ ಕತ್ತಿಗಳಿಂದ ಸಿಳ್ಳನೆ ಸೀಳಲ್ಪಟ್ಟು, ಆ ಹಂದಿಯು ಮುಂದರಿಸಲಾರದೆ ಅವನ ಕೈಬಳಿಯಲ್ಲಿಯೇ ರಕ್ತದ ಹೊನಲಿನಲ್ಲಿ ಹೊರಳಾಡಿ ಪ್ರಾಣಬಿಟ್ಟಿತು. ಚೆನ್ನ ಯನ ಎರಡು ಕೈಗಳ ಎಲುಬುಗಳು ಮಾತ್ರ ತೂಗುತಿದ್ದುವು; ಹಂದಿಯ ತಿವಿತ ದಿಂದ ಅವುಗಳಲ್ಲಿನ ಮಾಂಸವೂ ರಕ್ತವೂ ಕೈಬಿಟ್ಟುಹೋಗಿದ್ದುವು.

ಹಂದಿಯು ಪ್ರಾಣಬಿಟ್ಟ ಹೊತ್ತಿಗೆ ಸರಿಯಾಗಿ ಪಂಜದ ಸೀಮೆಯವರು ಅಲ್ಲಿಗೆ ಬಂದು ಮುಟ್ಟಿದರು. ಬೇಟೆಗಾರರ ಬೆಳಗಿನ ಕೋಲಾಹಲವನ್ನು ಕೇಳಿ ಚೆಂಡುಗಿಡಿಯು ಅವರನ್ನು ಮೊದಲೇ ಕಳುಹಿಸಿದ್ದರೂ ಎಣ್ಮೂರಿನವರು ಯಾವ ಕಾಡನ್ನು, ಯಾವ ಕುಂಜವನ್ನು ಎಬ್ಬಿಸುತ್ತಾರೆಂದು ತಿಳಿಯದೆ, ಅವರು ಸುತ್ತಾಡಿ ಸುತ್ತಾಡಿ ಕಟ್ಟಕಡೆಗೆ ಇಲ್ಲಿಗೆ ಬಂದು ಕೂಡಿದರು.

ಅವರ ಕಡೆಯ ಮುಖ್ಯಸ್ಥನೊಬ್ಬನು "ನಮ್ಮ ಗಡಿಯಲ್ಲಿ ಬಿದ್ದುದನ್ನು ನಾವು ಕೊಡಲಿಕ್ಕಿಲ್ಲ. ಹಂದಿಯ ತಲೆಬಾಲಗಳನ್ನು ಕೊಟ್ಟು ಹೋಗ ಬೇಕು. ಇಲ್ಲದಿದ್ದರೆ ನಾವು ಹಂದಿಯನ್ನು ಒಯ್ಯುತ್ತೇವೆ" ಎಂದು ಹೇಳಿ, ಗಟ್ಟಿಯಾದ ಬೀಳುಗಳನ್ನು ತರಿಸಿ, ಹಂದಿಯ ಸೊಂಟಕ್ಕೆ ಸಿಕ್ಕಿಸಿ, ತನ್ನ ಕಡೆಯ ಆಳುಗಳಿಂದ ಅದನ್ನು ಎಳೆಯಿಸಿದನು.

ಗಾಯಗಳಿಂದ ಜರ್ಜರಿತವಾಗಿ ಹೋದ ಚೆನ್ನಯನು ಎದ್ದುನಿಂತು, "ಅಣ್ಣಾ! ಏನು ನೋಡುತ್ತೀರಿ? ಈಗ ಈ ಹಂದಿಗೆ ಗೆಲವು ಹೇಳುತ್ತೀರೊ? ಇಲ್ಲವೆ ಪಂಜದ ಮುನ್ನೂರು ಆಳಿಗೆ ಇದಿರಾಗುತ್ತೀರೊ?" ಎಂದು ಕೇಳಿದನು.

ಕೋಟಿಯು "ಚೆನ್ನಯ, ನೀನು ಮುಂದರಿಸಬೇಡ. ನಾನು ಇನ್ನೊಮ್ಮೆ ಒಡಂಬಡಿಸುತ್ತೇನೆ. ನಾವು ಕೊಂದ ಹಂದಿ ನಮ್ಮದಲ್ಲವೇ?" ಎಂದು ಪಂಜದವರ ಹತ್ತಿರ ಮಾತಾಡುವುದಕ್ಕೆ ಪ್ರಾರಂಭಿಸಿದನು.

ಅಷ್ಟರಲ್ಲಿ ಪಂಜದವರು ಬೀಳುಗಾಕಿ ಹಂದಿಯನ್ನು ಎಳೆದುಕೊಂಡು ಹೋಗಲು ಸಿದ್ಧವಾಗಿದ್ದುದನ್ನು ಕಂಡು ಚೆನ್ನಯನು ತನ್ನ ನಡುವಿಗಿದ್ದ ಬೆಳ್ಳಿಯ ಜೋಡು ಉಡುದಾರವನ್ನು ಈಚೆಗೆ ತೆಗೆದು, ಹಂದಿಯ ಎರಡು ದಾಡೆಗಳಲ್ಲಿ ಸಿಕ್ಕಿಸಿ, ಅದನ್ನು ಒಬ್ಬನೇ ಹಿಂದಕ್ಕೆ ಸೆಳೆದು, ಪಂಜಕ್ಕೂ ಎಣ್ಮೂರಿಗೂ ನಡುವೆ ಇರುವ ಮಂಜಳಪಾದೆ ಎಂಬ ಸ್ಥಳದಲ್ಲಿ ಸರಸರನೆ ಒಯ್ದು ತಂದನು. ಅನಂತರ ಇಕ್ಕಡೆಯವರಿಗೆ ಹೊಯ್‌ಕೆಯ್ ಆಯಿತು. ಕೋಟಿಚೆನ್ನಯರು ಆ ಮುನ್ನೂರು ಆಳುಗಳಲ್ಲಿ ಹಲವರನ್ನು ಸುಗ್ಗಿಬೆಳೆಯ ಹುಲ್ಲುಸೂಡಿಗಳನ್ನು ಮಗುಚುವಂತೆ ಅಡ್ಡಹಾಕಿದರು. ಅಳಿದುಳಿದವರು ಪ್ರಾಣವನ್ನು ಕೈಯಲ್ಲಿ ಹಿಡಿದುಕೊಂಡು, ಬೆನ್ನಿಗೆ ಕಾಲುಕೊಟ್ಟರು.

ತರುವಾಯ ಹಂದಿಯನ್ನು ಸೀಳಿದ್ದಾಯಿತು; ಎಣ್ಮೂರು ಬಲ್ಲಾಳನ ಅಪ್ಪಣೆ ಪ್ರಕಾರ ಎಲ್ಲರಿಗೂ ಮಾಂಸವನ್ನು ಹಂಚಿದ್ದಾಯಿತು; ಕೋಟಿ ಚೆನ್ನಯರು ಬೇಟೆಯ ಆಯಾಸವನ್ನು ಎಣ್ಣೆಯ ಸ್ನಾನದಿಂದ ಕಳೆದದ್ದಾಯಿತು. ಒಂದು ವಾರದೊಳಗೆ ಅವರ ಮೈಗಾಯಗಳೆಲ್ಲ ವಾಸಿಯಾಗಿ ಅವರ ಭುಜಗಳು ಮತ್ತೆ ಕುದುರುವುದಕ್ಕೆ ಹತ್ತಿದುವು.

ಇತ್ತ ಎಣ್ಮೂರಿನ ಮೇಲೆ ದಂಡೆತ್ತಿ ಹೋಗಬೇಕೆಂದು ಹವಣಿಸುತಿದ್ದ ಪೆರುಮಾಳು ಬಲ್ಲಾಳನಿಗೂ ಚೆಂದುಗಿಡಿಗೂ ಈ ಬೇಟೆಯಿಂದ ಒಂದು ನೆಪವು ದೊರೆಯಿತು. ಪೆರುಮಾಳನು ಎಣ್ಮೂರನ್ನು ಕಾವೇರಿ ಸಂಕ್ರಮಣದೊಳಗೆನೇ ಪುಡಿಪುಡಿ ಮಾಡಬೇಕೆಂದು ಇದ್ದನು. ಆದರೆ ಪಂಜದಲ್ಲಿ ಕೊಳುಗುಳಕ್ಕೆ ಬೇಕಾದ ಸಾಮಗ್ರಿಗಳು ಒದಗದೆ ಇದ್ದುದರಿಂದಲೊ ಅಥವಾ ಕೇಮರಬಲ್ಲಾಳನ ಬುದ್ಧಿಯು ಕೆಸರುಗದ್ದೆಯ ಗೂಟದಂತೆ ಇದ್ದುದರಿಂದಲೊ ಅಥವಾ ಇನ್ನು ಯಾವ ಕಾರಣದಿಂದಲೊ ತುಲಾ ಸಂಕ್ರಾಂತಿಯು

ಕಳೆದರೂ ಯುದ್ಧಸಿದ್ಧತೆಯು ಆಗಲಿಲ್ಲ. ಅದಕ್ಕಾಗಿ ಪೆರುಮಾಳು ಬಲ್ಲಾಳನು ಇರುಳು ನಿದ್ದೆಯಿಂದ ಎದ್ದೆದ್ದು ತವಕಿಸುತಿದ್ದನು. ಆತನು ಪಂಜದ ಮುನ್ನೂರು ಆಳುಗಳ ಮೋರೆಗೆ ಮಸಿಯಾದ ವಾರ್ತೆಯನ್ನು ಕೇಳಿ, ಅದಕ್ಕೆ ತಕ್ಕದಾದ ಪ್ರತಿಕಾರವನ್ನು ಎಣ್ಮೂರು ಬಲ್ಲಾಳನಿಗೆ ಮಾಡಬೇಕೆಂದು ಚೆಂದುಗಿಡಿಗೆ ಸೂಚಿಸಿದನು. ಹೀಗೆ ಪೆರುಮಾಳು ಬಲ್ಲಾಳನು ಕೊಟ್ಟ ಧೈರ್ಯ ದಿಂದ ಉಬ್ಬಿ ಚೆಂದುಗಿಡಿಯು ಪರಿಹಾಸ್ಯಕರವಾದ ಒಂದು ಬಗೆಯ ಒಕ್ಕಣೆಯ ಓಲೆಯನ್ನು ಎಣ್ಮೂರಿಗೆ ಕಳುಹಿಸಿದನು.

ತುಲಾಸಂಕ್ರಾಂತಿಯು ಕಳೆದ ಏಳನೆಯ ದಿನ ಈ ಪತ್ರವು ಎಣ್ಮೂರಿಗೆ ಬಂದು ಮುಟ್ಟಿತು. ದೇವಬಲ್ಲಾಳನು ಬೀಡಿನಲ್ಲಿ ಓಲಗವಾಗಿದ್ದನು. ಎಡದ ಮೈಯಲ್ಲಿ ಕಿನ್ನಿಚೆನ್ನಯ, ಬಲದಮೈಯಲ್ಲಿ ಕೋಟಿಚೆನ್ನಯ, ಮುಂದು ಗಡೆಯಲ್ಲಿ ಹದಿನೆಂಟು ಪೇಟೆಯವರು, ಹಿಂದುಗಡೆಯಲ್ಲಿ ಚಾಮರಗಳನ್ನು ಬೀಸುವ ಕನ್ನೆಯರು, ಹೀಗೆ ಸಕಲ ವಿಲಾಸವೈಭವಗಳ ಒಡ್ಡೋಲಗದಲ್ಲಿ ಒಪ್ಪುತ್ತಿರುವ ಎಣ್ಮೂರು ದೇವಬಲ್ಲಾಳನ ಸಮಕ್ಷದಲ್ಲಿ ಪಂಜದ ಹರಿ ಕಾರನು ತಂದಿದ್ದ ಓಲೆಯನ್ನು ಬೀಡಿನ ಸೇನಬೋವನು ಓದಿದನು. ಅದೆಂತೆಂದರೆ—

ಶ್ರೀಮತ್ತು ಪಂಜ ಬೀಡಿನ ಬಲ್ಲಾಳ ಪಟ್ಟದಲ್ಲಿ ಅಭಿಷಿಕ್ತರಾದ ಪಂಜಸಂಸ್ಥಾನದ ಶ್ರೀ ಕೇಮರ ಬಲ್ಲಾಳರು ಎಣ್ಮೂರು ಬೀಡಿನ ದೇವಬಲ್ಲಾಳರಿಗೆ ಬರೆಯಿಸಿದ ಪತ್ರ ವೇನೆಂದರೆ — ಸ್ವಸ್ತಿ! ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೬೧೭ನೆಯ ಶ್ರೀಮುಖ ಸಂವತ್ಸರದ ತುಲಾಮಾಸ ದಿನ ೨೫ರ ವರೆಗೆ ಉಭಯ ಕುಶಲೋಪರಿ. ತರುವಾಯ ನಮ್ಮ ನಿಮ್ಮ ಉಭಯ ರಾಜ್ಯಗಳನ್ನು ವಿಂಗಡಿಸಲಿಕ್ಕಾಗಿ ಪ್ರಾಕಾರಭ್ಯ ಹಾಕಿದ್ದ ಗಡಿಕಲ್ಲುಗಳನ್ನು ನಿಮ್ಮ ಕಡೆಯ ದುರ್ಮನುಷ್ಯರು ಕಿತ್ತುಹಾಕಿ ನಮ್ಮ ಸಂಸ್ಥಾನದ ಸರಹದ್ದುಗಳನ್ನು ಬೇರ್ಪಡಿಸಿದ್ದಾರೆಂಬದಾಗಿಯೂ, ನಮ್ಮ ಅಪ್ಪಣೆ ಇಲ್ಲದೆ ನಮ್ಮ ಸಂಸ್ಥಾನಕ್ಕೆ ಸೇರಿದ್ದ ಬೈಲುಭೂಮಿಯನ್ನು ಬಲಕಾಯಿಸಿದ್ದಾರೆಂಬದಾಗಿಯೂ, ಇತ್ತಲಾಗೆ ನಮ್ಮ ಕಾಡನ್ನು ಒಳನುಗ್ಗಿ ನಮ್ಮೊಡನೆ ಹೇಳದೆ ಕೇಳದೆ ಹಂದಿಯನ್ನು ಬೇಟೆಯಾಡಿ ನಮ್ಮ ಕಡೆಯವರ ಮಾತನ್ನು ಮೀರಿ ಅದನ್ನು ಎಳೆದುಕೊಂಡು ಹೋಗಿ ದ್ದಾರೆಂಬದಾಗಿಯೂ, ನಮ್ಮ ಚಿತ್ತಕ್ಕೆ ಬಂದುದರಿಂದ, ಈ ವಿವಾದಾಂಶಗಳು ಸರಿಯಾಗಿ ಇತ್ಯರ್ಥವಾಗುವುದಕ್ಕೆ ಮುಂಚಿತವಾಗಿ ನಮ್ಮ ಕಾಡಿನಲ್ಲಿ ಕೊಂದಿದ್ದ ಹಂದಿಯ ತಲೆ ಬಾಲಗಳನ್ನು ಈ ಓಲೆ ತರುವವರ ಕೈಯಲ್ಲಿ ನಮ್ಮ ಸಮಾಧಾನಕ್ಕಾಗಿ ಕೊಡಲೆ ಕಳುಹಿಸಿಕೊಡತಕ್ಕದ್ದು; ಅದನ್ನು ಕಳುಹಿಸದ ಕಾಲಕ್ಕೆ ಆ ಹಂದಿಯನ್ನು ಕೊಂದವ ರನ್ನು ನಮಗೆ ಒಪ್ಪಿಸಿಕೊಡತಕ್ಕದ್ದು; ಅದು ಆಗದಿದ್ದರೆ ನೀವು ಗಂಡುಗಲಿಯಂತೆ

ಕೊಳುಗುಳಕ್ಕೆ ಜನಗಳನ್ನು ಕೂಡಿಕೊಂಡು ಬರತಕ್ಕದ್ದು. ಹಾಗೆ ಕಾಳಗಕ್ಕೆ ಬರಲು ಆಗದಿದ್ದರೆ, ಬಲ್ಲಾಳರಾದ ನೀವು ಸೀರೆಯುಟ್ಟು, ರವಕೆ ತೊಟ್ಟು ಬೀಡಿನ ಚಾವಡಿಯಲ್ಲಿ ತಲೆಬಾಗಿ ನಿಂತುಕೊಂಡಿದ್ದಲ್ಲಿ ಬಿಲ್ಲಾಳರಾದ ನಾವು ದಿಬ್ಬಣ ಸಮೇತ ಹೆಣ್ಣು ಕೇಳಲು ಬರುವಂಥವರಿದ್ದೇವೆ.

ಹೀಗೆ ಸೇನಬೋವನು ಓದಿದ ಪತ್ರವನ್ನು ಕೇಳಿ ದೇವಬಲ್ಲಾಳನ ಬಾಯಿ ನೀರು ಆರಿಹೋಯಿತು. ಎರಡು ನಿಮಿಷಗಳ ವರೆಗೆ ಓಲಗದಲ್ಲಿ ಸದ್ದುಗಲಗು ಇಲ್ಲದೆ ಮೌನವು ಕವಿಯಿತು.

"ಕಿನ್ನಿಚೆನ್ನಯ, ಓಲೆಯ ಒಕ್ಕಣೆ ಕಿವಿಯಲ್ಲಿ ಹೋಯಿತಷ್ಟೆ. ಇದಕ್ಕೆ ಏನು ಹೇಳುತ್ತೀ?" ಎಂದು ದೇವಬಲ್ಲಾಳನು ಕಿನ್ನಿಚೆನ್ನಯನ ಕಡೆಗೆ ಮೋರೆ ತಿರುಗಿಸಿ, "ಈ ಕೋಟಿಚೆನ್ನಯರ ಸಂಗತಿಯು ಬಿಸಿಹಾಲಿನ ಗುಟುಕಿನಂತೆ ಒಳಗೆ ತೆಗೆದುಕೊಳ್ಳಲಿಕ್ಕೂ ಇಲ್ಲ, ಹೊರಗೆ ಉಗುಳಲಿಕ್ಕೂ ಇಲ್ಲ ಎಂಬಂತಾಗಿದೆ. ಏನು ಮಾಡೋಣ?" ಎಂದು ಕೇಳಿದನು.

ಕಿನ್ನಿಚೆನ್ನಯನು ಎದ್ದು "ಬುದ್ಧಿ," ಎಂದು ದೈನ್ಯದಿಂದ ನುಡಿದು, ಸುಮ್ಮನಾದನು.

ಆಗ ಕೋಟಿಯು "ಬುದ್ಧಿ, ಬೀಡಿನವರನ್ನು ಹುರಿಗೊಳಿಸತಕ್ಕ ತಾವೇ ಹೀಗೆ ಕಳವಳಿಸಿದರೆ ಮಾಡುವುದೇನು? ಬೆಂಕಿಗೆ ಚಳಿ ಹಿಡಿದರೆ, ನೀರಿಗೆ ಬಾಯಿ ಆರಿದರೆ, ಗಾಳಿಗೆ ಮೈ ಬೆವರಿದರೆ ನಿವಾರಿಸ ತಕ್ಕವರು ಯಾರು? ಇಂಥ ಪ್ರಸಂಗದಲ್ಲಿ ತಮ್ಮಂಥವರು ವಿವೇಚನೆಯಿಂದ ವರ್ತಿಸಬೇಕಾಗಿದೆ"— ಎಂದನು.

ಆಗ ಚೆನ್ನಯನು "ಬುದ್ಧಿ, ನಮ್ಮಿಂದ ತಮಗಾಗಲಿ ತಮ್ಮ ರಾಜ್ಯಕ್ಕಾಗಲಿ ಅಪಾಯವು ಬರುವಂತಿದ್ದರೆ, ನಾನು ಈಗಲೇ ಹೊರಟೆ. ನನಗೆ ಅಪ್ಪಣೆಯಾಗಲಿ" ಎಂದು ಕೈಮುಗಿದು ನಿಂತುಕೊಂಡನು.

ದೇವಬಲ್ಲಾಳನು ಆ ಬಂಟರ ದೆಸೆಯಿಂದ ತನ್ನ ರಾಜ್ಯಕ್ಕೆ ಆಪತ್ತು ಒದಗಿತೆಂದು ತನ್ನ ಮನಸ್ಸಿನಲ್ಲಿಯೇ ನೆನಸಿ, ಅದನ್ನು ಬಾಯಿಬಿಟ್ಟು ಹೇಳಲಾರದೆ, ಉಸ್ಸೆಂದು ಒಮ್ಮೆ ಉಸಿರುಬಿಟ್ಟನು.

ಅದನ್ನು ಕಂಡು ಕೋಟಿಯು—"ಬುದ್ಧಿ, ತಾವು ಚಿಂತೆ ಬಿಡಬೇಕು. ಇನ್ನು ನಮಗೆ ರಣವೀಳ್ಯವನ್ನು ಕೊಟ್ಟು ಕಳುಹಿಸಿದ್ದಲ್ಲಿ

ನಾವು ಹಗೆಗಳನ್ನು ಎದುರ್ಗೊಂಡು ರಣರಂಗದಲ್ಲಿ ಅವರ ತಲೆಗಳನ್ನು ಚೆಂಡಾಡಿ, ಇಲ್ಲವೆ ನಮ್ಮ ನೈರಕ್ತವನ್ನು ಚೆಲ್ಲಾಡಿ, ತಮ್ಮ ಋಣವನ್ನು ತೀರಿಸಬೇಕೆಂದು ಇದ್ದೇವೆ" ಎಂದು ಗಟ್ಟಿಯಾಗಿ ಹೇಳಿದನು.

ಈ ಮಾತುಗಳ ಗಾಳಿಯು ಬೀಸುತ್ತಲೇ ಅಲ್ಲಿದ್ದವರ ಗರ್ವೋದ್ರೇಕದಿಂದಲೂ ಭುಜಗಳ ಚಪ್ಪಾಳೆಯಿಂದಲೂ ಆ ಆಸ್ಥಾನವು ಕದಡಿದಂತಾಯಿತು. 'ಸಿಟ್ಟೆಬ್ಬಿಸುವ ಓಲೆ!' 'ಸುಡುಗಾಡು ಓಲೆ!' 'ಸೊಕ್ಕಿನ ಓಲೆ!' ಎಂಬ ಬಿರುನುಡಿಗಳು ಬಾಯಿಂದ ಬಾಯಿಗೆ ಹಾರಿದುವು. ಒಬ್ಬಿಬ್ಬರು ಆ ಓಲೆಕಾರನ ಮೇಲೆ ಕೈಮಾಡುವುದಕ್ಕೆ ಹೋದರು. ಕೋಟಿಯು ಬೇಡಬೇಡವೆಂದು ತಡಿಸಿದರೂ, ಬೀಡಿನ ಮಂಜುಪೆರ್ಗಡೆ ಎಂಬವನು ಆ ಓಲೆಯ ಕಡೆಕುಡಿ ಕತ್ತರಿಸಿ, ಅದನ್ನು ಓಲೆಕಾರನ ಕೊರಳಿಗೆ ಕಟ್ಟಿ, ಅವನನ್ನು ಬೈದು ಭಂಗಿಸಿ, ಚಾವಡಿಯಿಂದ ಹೊರಕ್ಕೆ ದೊಬ್ಬಿ, ಅವಮಾನ ಮಾಡಿ ಕಳುಹಿಸಿ ಬಿಟ್ಟನು.

ಹೀಗೆ ಮೋರೆಗೆ ಮಂಗಳಾರತಿಯಾಗಿ ಪಂಜಕ್ಕೆ ಹಿಂದೆರಳಿದ ತನ್ನ ಕಡೆಯ ಹರಿಕಾರನನ್ನು ಕಂಡು ಚೆಂದುಗಿಡಿಯು ಅತ್ಯಂತ ಕೋಪಾಟೋಪದಿಂದ ಕೇಮರಬಲ್ಲಾಳನ ಬಳಿಗೆ ಹೋಗಿ, ಎಣ್ಮೂರಿನ ಮೇಲೆ ದಾಳಿವರಿದು ಹೊರಡುವುದಕ್ಕೆ ಎಲ್ಲವು ಸಿದ್ಧವಾಗಿರಬೇಕೆಂದು ಅಪ್ಪಣೆಕೊಡಿಸಿ, ತಾನು ಸ್ವತಃ ಪಡುಮಲೆಯ ವರೆಗೆ ತೀವ್ರಗತಿಯಿಂದ ಹೋಗಿ, ತೂಕಡಿಸುತ್ತಲಿದ್ದ ಪೆರುಮಾಳು ಬಲ್ಲಾಳನನ್ನು ಎಚ್ಚರಿಸಿ, ಸೇನಾಸಮೇತನಾಗಿ ಪಂಜದವರ ಪಕ್ಷವನ್ನು ಸೇರಿಕೊಳ್ಳುವಂತೆ ಆತನ ಸಹಾಯವನ್ನು ಅಪೇಕ್ಷಿಸಿದನು.

ತುಲಾಮಾಸವು ಕಳೆದು ವೃಶ್ಚಿಕಮಾಸವು ತಲೆದೋರಿ ಹತ್ತು ದಿನಗಳು ದಾಟಿ ಹೋದುವು. ಗದ್ದೆಗಳಲ್ಲಿದ್ದ ಪೈರು ಒಕ್ಕಲಿಗನ ಅಂಗಳದಲ್ಲಿ ಮೊದಲೇ ಭದ್ರವಾಗಿ ಸೇರಿಕೊಂಡಿತ್ತು. ನೀರಿದ್ದಲ್ಲಿ ಸುಗ್ಗಿಯ ಬೆಳೆಯು ಒಂದೂವರೆ ಗೇಣು ಮೇಲೆ ಬಂದಿತ್ತು. ಹಿಂಗಾರು ಮಳೆಯು ಬಾರದೆ ಆಕಾಶವು ಶುಭ್ರವಾಗಿತ್ತು. ಮಳೆಗಾಲದಲ್ಲಿ ಸ್ತಬ್ಧವಾಗಿ ಹೋಗುವ ಜನರ ಕ್ರಿಯಾಕಲಾಪಗಳು ಈ ಮೊದಲೇ ಸರಾಗವಾಗಿ ನಡೆಯ ತೊಡಗಿದ್ದುವು. ಬೆಟ್ಟದ ತೊರೆಗಳಲ್ಲಿ ನೀರು ಇಳಿದಿದ್ದುದರಿಂದ, ಹೇರಾಟದ ಎತ್ತುಗಳು ಗಟ್ಟದ ಸರಕನ್ನು ತುಳುನಾಡಿಗೆ ಹೊತ್ತುಕೊಂಡು ಬರುವುದಕ್ಕೆ

ಪ್ರಾರಂಭವಾಗಿತ್ತು. ತುಳುನಾಡಿನ ಅತ್ಯಂತ ಪ್ರಸಿದ್ಧವಾದ ಸುಬ್ರಹ್ಮಣ್ಯ ಜಾತ್ರೆಯು ಸಮೀಪಿಸಿತು.

ಜಾತ್ರೆಗೆ ನಾಲ್ಕು ದಿವಸ ಮುಂಚಿತವಾಗಿ ಪೆರುಮಾಳು ಬಲ್ಲಾಳನು ಮಂದಿಮಾರ್ಬಲದೊಡನೆ ಪಡುಮಲೆಯಿಂದ ತೆರಳಿ, ಪೆರ್ಲಂಪಾಡಿಯ ಮಾರ್ಗ ವಾಗಿ ಹೋಗಿ, ಎರುಕಡಪಿನ ಹತ್ತಿರ ಬಂದು ಇಳಿದನು. ಪಂಜದ ಕೇಮರ ಬಲ್ಲಾಳನ ಜನಗಳು ಸಾಮಾನುಸರಂಜಾಮನ್ನು ಶೇಖರಿಸಿಕೊಂಡು ಕಡ ಪಿನ ಆಚೆಗೆ ಇದ್ದರು; ಕೇಮರನ ಇನ್ನೊಂದು ದಂಡು ಎಣ್ಮೂರಿನ ಸರಹದ್ದಿನ ಕಂಡಿಕಣಿವೆಗಳನ್ನು ಕಟ್ಟಿ, ರಸ್ತೆಮುಸ್ತೈದೆಗಳು ಎಣ್ಮೂರಿಗೆ ಹೋಗು ವುದನ್ನು ನಿಲ್ಲಿಸಿಬಿಟ್ಟಿತ್ತು. ಈ ಸೈನ್ಯವು ಕಳ್ಳದಾರಿಯಾಗಿ ಬಂದು ತನ್ನ ರಾಜ್ಯದ ಗಡಿಗಳಲ್ಲಿ ಬಲಕಾಯಿಸಿ ನಿಂತಿದ್ದ ಸುದ್ದಿಯು ಜಾತ್ರೆಯ ಮುಂಚಿನ ದಿವಸ ಎಣ್ಮೂರಿನ ದೇವಬಲ್ಲಾಳನಿಗೆ ಗೊತ್ತಾಗಿ ತನ್ನ ಕಡೆಯ ೫೦೦ ಮಂದಿಯನ್ನು ಎಣ್ಮೂರು ದೇವಸ್ಥಾನದ ಮುಂದುಗಡೆಯ ಬೈಲಿನಲ್ಲಿ ನಿಲ್ಲಿಸಿ, ಜಗಳಮಾಡುವುದಕ್ಕೆ ಸಿದ್ಧವಾಗಿದ್ದನು.

ಯುದ್ಧದ ಸಿದ್ಧತೆಯನ್ನು ಕಂಡುಕೇಳಿದ ಸೀಮೆಯವರು ತಮ್ಮಬದುಕು ಬಾಳನ್ನೂ ದನಕರುವನ್ನೂ ದೂರಕ್ಕೆ ಸಾಗಿಸಲು ಪ್ರಯತ್ನಿಸಿದರು; ಚಿನ್ನ ಬೆಳ್ಳಿ ಇದ್ದವರು ಅದನ್ನು ನೆಲಮರೆ ಮಾಡಿಕೊಂಡು ತಮ್ಮ ಮನೆಗಳನ್ನು ಕಾದುಕೊಂಡಿದ್ದರು; ಪುದರ್ಗಳ ಸೀಮೆಯ ರೈತರು ಲೂಟಿಯ ಭಯದಿಂದ ತಮ್ಮ ಹೆಂಡತಿಮಕ್ಕಳು ಆದಿಯಾಗಿ ಸರ್ವಸ್ವವನ್ನು ಕೊಕ್ಕಡದ ಮಾರ್ಗ ವಾಗಿ ಸಾಗಿಸಿಬಿಟ್ಟರು.

ಮಾರ್ಗಶಿರ ಶುದ್ಧ ಷಷ್ಠಿಯ ದಿನ ಸೂರ್ಯೋದಯಕ್ಕೆ ಸರಿ ಯಾಗಿ ದೇವಬಲ್ಲಾಳನು ಕೋಟಿಚೆನ್ನಯರಿಗೆ ತೊಡವುತಾಂಬೂಲ ಗಳನ್ನು ಕೊಟ್ಟು, ತನ್ನ ಸೈನ್ಯಕ್ಕೆ ಅವರನ್ನು ಮುಖಂಡರನ್ನಾಗಿ ಮಾಡಿ, ಅವರ ಆಜ್ಞಾನುಸಾರವಾಗಿ ನಡೆಯುವುದಕ್ಕೆ ಅನುವಾದನು. ಕೋಟಿಚೆನ್ನ ಯರು ಸೈನ್ಯದ ಜನದಲ್ಲಿ ಬೀಡಿನ ಪಹರೆಗೂ, ಎಣ್ಮೂರಿನ ಚೌಸುತ್ತಿನ ಕಾವಲಿಗೂ, ಬಲ್ಲಾಳನ ಚಾಕರಿಗೂ ಬೇಕಾದಷ್ಟು ಮಂದಿಯನ್ನು ವಿಂಗ ಡಿಸಿ, ಉಳಿದ ಅರೆವಾಸಿ ಮಂದಿಯನ್ನು ತಮ್ಮ ಸಂಗಡ ಕೂಡಿಕೊಂಡು, ಎಣ್ಮೂರು ದೇವಸ್ಥಾನದ ದಾರಿಯನ್ನು ಹಿಡಿದರು.

ಹೊತ್ತು ಎರಡು ಮೂರು ಏರುವಷ್ಟರಲ್ಲಿ ಇತ್ತಂಡದವರಿಗೆ ಮುಖ ಸಂಧಿಸಿ ಜಗಳಕ್ಕೆ ಪ್ರಾರಂಭವಾಯಿತು. ಇಕ್ಕಡೆಯವರು ಎಸೆದ ಬಾಣ ಗಳಿಂದ ಅನೇಕರು ಮಡಿದುಬಿದ್ದರು. ಮೂರುಮುಕ್ಕಾಲು ಗಳಿಗೆಯಲ್ಲಿ ಪಂಜದ ಕೇಮರ ಬಲ್ಲಾಳನು ಏರಿದ್ದ ಕುದುರೆಯ ಕಣ್ಣಿಗೆ ಬಾಣವು ತಗಲಿ, ಬಲ್ಲಾಳನು ಕುದುರೆಯಿಂದ ಕೆಳಕ್ಕೆ ಬಿದ್ದು, ಯುದ್ಧರಂಗದಿಂದ ಓಡಿ ಹೋದನು. ಎಣ್ಮೂರಿನ ಕಡೆಯಿಂದ ಯುದ್ಧಮಾಡುತಿದ್ದ ಮಂಜುಹೆಗ್ಗಡೆ ಎಂಬ ವೀರನು ಜಖಂ ಆಗಿ ಅಲ್ಲಿಯೆ ಮೃತನಾದುದನ್ನು ಕಂಡು ಎಣ್ಮೂರಿನವರು ಹಿಮ್ಮೆಟ್ಟಿ ಪಲಾಯನದ ಮಾರ್ಗವನ್ನು ನೋಡುತಿದ್ದರು. ಆ ಹೊತ್ತಿಗೆ ಸರಿಯಾಗಿ ಪೆರುಮಾಳ ಬಲ್ಲಾಳನೂ ಚೆಂದುಗಿಡಿಯೂ ತಮ್ಮ ತಮ್ಮ ಕುದುರೆ ಗಳನ್ನು ದೌಡಾಯಿಸಿಕೊಂಡು, ಮುಂದೊತ್ತಿ ಬರುವಂಥವರಾದರು. ಎಣ್ಮೂರಿ ನವರು ಕಾಲಿಗೆ ಬುದ್ಧಿ ಹೇಳತೊಡಗಿದರು.

ಎಣ್ಮೂರಿನ ಜನಗಳು ನಿಂದು ನಿತ್ತರಿಸಲಾರದೆ ಹಿಂದೆಗೆದು ಓಡಿ ಹೋಗುವುದನ್ನು ಕೋಟಿಚೆನ್ನಯರು ಕಂಡು ತಮ್ಮ ಕತ್ತಿಗಳನ್ನು ಜಳಪಿ ಸುತ್ತ, ಇದಿರಿಸಿಕೊಂಡು ಬಂದವರನ್ನು ತಮ್ಮ ಖಡ್ಗಕ್ಕೆ ಆಹುತಿಯನ್ನಾಗಿ ಮಾಡುತ್ತ, ಓಡಿಹೋಗುವವರನ್ನು ಮುಖತಿರುಪಿ ಯುದ್ಧಮಾಡಬೇಕೆಂದು ಹುರಿಗೊಳಿಸುತ್ತ, ಬಾಕಿಮಾರು ಗದ್ದೆಗೆ ಬಂದರು. ಅಷ್ಟರಲ್ಲಿ ಶತ್ರು ಸೈನ್ಯದ ೨೦೦ ಜನರು ಅವರನ್ನು ಮುಸುಕಿ ಮುತ್ತಿದರು.

ತಮ್ಮನ್ನು ಬಳಸಿಕೊಂಡು ನಿಂತಿದ್ದ ಹಗೆಯವರನ್ನು ಕಂಡು ಕೋಟಿ ಚೆನ್ನಯರು ಬೆನ್ನಿಗೆ ಬೆನ್ನು ಕೊಟ್ಟು ನಿಂತು, ಸುತ್ತುಮುತ್ತಲಿಂದ ಬರ ತಕ್ಕ ಏಟುಗಳನ್ನು ಒಂದು ಗಳಿಗೆಯ ವರೆಗೆ ತಪ್ಪಿಸಿಕೊಂಡರು. ತರು ವಾಯ ಅವರಿಬ್ಬರು ಕಬ್ಬಿನ ತೋಟಕ್ಕೆ ಬಿದ್ದ ಮರಿಯಾನೆಗಳಂತೆಯೂ, ಕುರಿ ಹಿಂಡನ್ನು ನುಗ್ಗಿದ ಹುಲಿಮರಿಗಳಂತೆಯೂ ಶತ್ರುಗಳನ್ನು ಕೈಗೆ ಸಿಕ್ಕಂತೆ ಕೊಲ್ಲುತ್ತ ರಣಭಯಂಕರರಾಗಿ ಯುದ್ಧಮಾಡುತಿದ್ದಾಗ ಒಂದು ಚಿತ್ರ ಬಾಣವು ಕೋಟಿಯ ಅಪಾಯಸ್ಥಾನಕ್ಕೆ ತಗಲಿ, ಅವನನ್ನು ಕಲ್ಲುಗೊಂಬೆ ಯಂತೆ ಮಾಡಿಬಿಟ್ಟಿತು.

ಅದನ್ನು ಕಂಡು ಚೆನ್ನಯನು—"ಅಣ್ಣಾ! ಕಾಲು ತಿರುಗಿಸಿ, ಕಾಲು ತಿರುಗಿಸಿ" ಎಂದು ಚೀರಿದನು.

ಕೋಟಿ—"ತಮ್ಮಾ! ತಲೆಗೆ ಏರಿದೆ ಚಿತ್ರಬಾಣ; ಎದೆಯನ್ನು ಸೀಳಿದ ಶಿಳೀಮುಖ; ಕಣ್ಣಿಗೆ ಬೀಸಿದೆ ಅರಸಿನ ಹುಡಿ" ಎಂದು ಅಸ್ಫುಟವಾಗಿ ಹೇಳಿ, ಕೂಡಲೆ "ತಮ್ಮಾ—ನೀನು ಯಾವಾಗಲೂ ಹಿಂದುಮುಂದು ನೋಡುವುದಿಲ್ಲ. ಅಕೊ! ನಿನ್ನ ಬೆನ್ನ ಹಿಂದೆ" ಎಂದು ಕೈಸನ್ನೆಮಾಡಿದನು.

ಆ ಹೊತ್ತಿಗೆ ಸರಿಯಾಗಿ ಬಬ್ಬಸು ಚೆನ್ನಯನ ಬೆನ್ನ ಹಿಂದೆ ಕಳ್ಳ ಹೆಜ್ಜೆಯಿಂದ ನುಸುಳಿಕೊಂಡು ತನ್ನ ಕತ್ತಿಯನ್ನು ಆತನ ಕೊರಳಿಗೆ ಇಟ್ಟಿದ್ದನು.

ತಕ್ಷಣವೇ ಚೆನ್ನಯನು ಮೋರೆಯನ್ನು ತಿರುಗಿಸಿ, ಇದ್ದಲ್ಲಿಂದ ಪುಟ ನೆಗೆದು "ಅಣ್ಣಾ! ಇದು ನೆಗಳೆ; ಹರಿದು ಬಂದು ಕಚ್ಚುವ ಸ್ವಭಾವದ್ದು. ಕಣ್ಣಿಂದ ಕಾಣಲಿಕ್ಕಿಲ್ಲ, ಕೈಯಿಂದ ಮುಟ್ಟಲಿಕ್ಕಿಲ್ಲ ಎಂಬಂತೆ ಹಿಂದುಗಡೆಯಿಂದ ಬಂದಿದೆ" ಎಂದು ಹೇಳಿ, ತುಂಟ ಕುದುರೆಯಂತೆ ಕಾಲಿನಿಂದ ಒದೆದು ಬಿಟ್ಟನು. ಆ ಏಟು ಸಿಡಿಲಿನಂತೆ ಚೆಂದುಗಿಡಿಯ ಕಪಾಲಕ್ಕೆ ಬಿದ್ದು ಅವನು ಕಾಯಬಿಟ್ಟು ಸಂದನು.

ಚೆಂದುಗಿಡಿಯು ಸತ್ತದ್ದೇ ತಡ, ಅವನ ಸೈನಿಕರು ಕೊಳುಗುಳವನ್ನು ಬಿಟ್ಟು ಓಡತೊಡಗಿದರು. ಹೊತ್ತು ತಲೆಗೆ ಬರುವಷ್ಟರಲ್ಲಿ ಯುದ್ಧವು ಮುಗಿಯಿತು. ಯುದ್ಧದ ಜಯಧ್ವನಿಯು ಎಣ್ಮೂರು ಬೀಡಿಗೆ ಮುಟ್ಟಿತು. ಆಗ ದೇವಬಲ್ಲಾಳನು ಆ ವೀರರನ್ನು ಮಹಾಸಂಭ್ರಮದಿಂದ ಕಾಣುವುದಕ್ಕಾಗಿ ಪಟ್ಟದ ಜೋಡಿ ಕುದುರೆಗಳನ್ನೂ ಎರಡು ಪಲ್ಲಕಿಗಳನ್ನೂ ಸಿಂಗರಿಸಿಕೊಂಡು ಕಾಲ್ನಡೆಯಾಗಿ ಬಂದು, ದೇವಸ್ಥಾನದ ಮುಂದುಗಡೆಯ ಬಾಕಿಮಾರು ಗದ್ದೆಯಲ್ಲಿ ಗಾಯಗೊಂಡು ಬಿದ್ದಿದ್ದ ಕೋಟಿ, ಅವನ ಕಡೆಗಾಲದ ಸೇವೆ ಮಾಡುತ್ತಲಿದ್ದ ಚೆನ್ನಯ, ಇವರಿಬ್ಬರ ಹಿಂದುಗಡೆಯಲ್ಲಿ ಪಶ್ಚಾತ್ತಾಪದ ಮುಖಮುದ್ರೆಯಿಂದ ಮಾತಿಲ್ಲದೆ ನಿಂತಿದ್ದ ಪೆರುಮಾಳು ಬಲ್ಲಾಳ—ಈ ಮೂವರನ್ನು ಕಂಡನು. ಉಭಯಪಕ್ಷದ ಅನೇಕ ಸೈನಿಕರು ರಣರಂಗದಲ್ಲಿ ಮಡಿದು ಬಿದ್ದಿದ್ದರು. ಉಳಿದವರು ಪ್ರಾಣವನ್ನು ಕೈಯಲ್ಲಿ ಹಿಡಿದುಕೊಂಡು ಓಡಿ ಹೋಗಿದ್ದರು.

ದೇವಬಲ್ಲಾಳನು ಕೋಟಿಚೆನ್ನಯರನ್ನು ಕಂಡು, ಅವರ ಕಾಲಿಗೆ ಅಡ್ಡ ಬಿದ್ದು ನಮಸ್ಕರಿಸಿ, "ನನ್ನನ್ನೂ ನನ್ನ ಬೀಡನ್ನೂ ಕಾಪಾಡಿದ ಬಂಟರು ತಾವು.

ತಮ್ಮ ಅಡಿಯಾಳಾದ ನನ್ನನ್ನು ಕಾಯಬೇಕು. ನನ್ನ ಹಣೆಯನ್ನು ಕಡಿದು ತಮಗೆ ಮಣೆಯನ್ನಾಗಿ ಇಟ್ಟರೂ ತಮ್ಮ ಉಪಕಾರವನ್ನು ತೀರಿಸಲಾರೆನು. ಇನ್ನು ತಾವು ಈ ರಣಭೂಮಿಯನ್ನು ಬಿಟ್ಟು, ಈ ಪಲ್ಲಕಿಗಳಲ್ಲಿ ಓಲಗವಾಗಿ, ಬೀಡಿನ ಚಾವಡಿಗೆ ದಯೆಮಾಡಿಸಿ, ನನ್ನ ರಾಜ್ಯವನ್ನೆಲ್ಲಾ ಉದ್ಧರಿಸಬೇಕು" ಎಂದು ಭಕ್ತಿಪೂರ್ವಕವಾಗಿ ಬೇಡಿಕೊಂಡನು.

ಅಷ್ಟರಲ್ಲಿ ಪೆರುಮಾಳು ಬಲ್ಲಾಳನು ಮುಂದಕ್ಕೆ ಬಂದು ತನ್ನ ಕೈಗಳನ್ನು ಹಣೆಯ ಮೇಲೆ ಇಟ್ಟುಕೊಂಡು, "ನಾನು ಸಾಕಿದ ಮರಿಗಳ ಮೇಲೆ ಕೈಮಾಡಿದ ಪಾಪಿ ನಾನು! ಈ ಪಾಪಕ್ಕೆ ಇದೇ ಪ್ರಾಯಶ್ಚಿತ್ತ" ಎಂದು ಹೇಳಿ ತನ್ನ ಕೈಯಲ್ಲಿದ್ದ ಸುರಗಿಯನ್ನು ತನ್ನ ಹೊಟ್ಟೆಯೊಳಗೆ ಚುಚ್ಚಿಕೊಳ್ಳುವಷ್ಟರಲ್ಲಿ ಕೋಟಿಯು "ಬೇಡ ಬುದ್ಧಿ—ಕೈ ತಡೆಯಿರಿ" ಎಂದು ಸಂಜ್ಞೆ ಮಾಡಿದನು.

ಆಗ ಚೆನ್ನಯನು ಎದ್ದು ಪೆರುಮಾಳು ಬಲ್ಲಾಳನ ಕೈಯಲ್ಲಿದ್ದ ಸುರಗಿಯನ್ನು ಕಸಕೊಂಡನು.

ಇತ್ತ ಕೋಟಿಯು ವೈರಕ್ತದ ಪ್ರವಾಹದಲ್ಲಿ ಆತನ ಪ್ರಾಣವು ಮುಳುಗೇಳುತ್ತಲಿತ್ತು. ಆವನು ತಮ್ಮನೊಡನೆ "ನನ್ನನ್ನು ಈ ಶಿವಾಲಯದ ಇದಿರಾಗಿ ಮಲಗಿಸಿಬಿಡು" ಎಂದು ಹೇಳಿ, ಆಕಾಶದ ಕಡೆಗೆ ದೃಷ್ಟಿಯನ್ನು ತಿರುಗಿಸಿ "ಚೆನ್ನಯ, ಈ ದಿನ ಸುಬ್ರಹ್ಮಣ್ಯ ಜಾತ್ರೆ. ದೇವರು ರಥಾರೋಹಣವಾಗಿದ್ದಾರೆ. ಗರುಡಪಕ್ಷಿಯು ತನ್ನ ರೆಕ್ಕೆಗಳನ್ನು ಬಿಚ್ಚಿ ಮಂಡಲಾಕಾರವಾಗಿ ರಥದ ಮೇಲೆಯೇ ಆಕಾಶದಲ್ಲಿ ಸುತ್ತುವಂತೆ ಈ ಕಾಯಬಿಟ್ಟು ಕೈಲಾಸಕ್ಕೆ ಹೋಗಲು ನನ್ನ ಆತ್ಮವು ಹಾರೈಸುತ್ತಲಿದೆ. ಆದರೆ ನನಗೆ ಸ್ವರ್ಗಕ್ಕೆ ನೀರು ಕೊಡುವ ಮುಂಚೆ ದೇವಸ್ಥಾನದಲ್ಲಿ ಪೂಜೆಯಾಗಲಿ!" ಎಂಬ ಮಾತುಗಳನ್ನು ಮೆಲ್ಲನೆ ಒಂದೊಂದಾಗಿ ಹೇಳಿದನು.

ಸೂರ್ಯನು ಅಸ್ತಕ್ಕೆ ಹೋದನು. ದೇವಸ್ಥಾನದಲ್ಲಿ ಘಂಟಾನಾದವು ಕೇಳಿಸಿತು. ಪೂಜೆಗೆ ಪ್ರಾರಂಭವಾಯಿತು. ಮುಂಚಿನ ಕಾಲದಲ್ಲಿ ಎಂಥಾ ಭಯಂಕರ ಯುದ್ಧವು ನಡೆಯುತ್ತಲಿದ್ದರೂ ದೇವಸ್ಥಾನದ ಪೂಜಾವಿಧಿಗಳಿಗೆ ಇತ್ತಂಡದವರಿಂದಲೂ ಅಡ್ಡಿಯಾಗುತ್ತಿರಲಿಲ್ಲ.

ಪೂಜೆಯಾಗಿ ದೇವಸ್ಥಾನದ ಬ್ರಾಹ್ಮಣನು ಹೊರಕ್ಕೆ ತೆಗೆದುಕೊಂಡು ಬಂದ ಆರತಿಯನ್ನೂ ತೀರ್ಥವನ್ನೂ ಕೋಟಿಯು ಸ್ವೀಕರಿಸಿ ದೇವಬಲ್ಲಾಳನನ್ನು ಹತ್ತಿರಕ್ಕೆ ಕರೆದು, "ಬುದ್ಧಿ, ಇನ್ನು ಮುಂದೆ ಸಹಸ್ರಾವಧಿ ಕಾಲ ಈ ಮಹಾಲಿಂಗೇಶ್ವರನ ಪೂಜೆಯು ಪಡುಮಲೆಯಲ್ಲಿ ಅರವಟ್ಟಿಗೆ ಇಟ್ಟಿರುವ ಆ ಬ್ರಾಹ್ಮಣರ ಕೈಯಿಂದ ನಡೆಯಿಸಬೇಕು" ಎಂದು ನಂಬಿಗೆಯನ್ನು ತೆಗೆದುಕೊಂಡು, "ಬಾಯಿಗೆ ತೀರ್ಥವನ್ನು ಹೊಯ್ದು ಬಿಡಿ" ಎಂದು ಸೂಚಿಸಿ, ಬಾಯಿತೆರೆದನು.

ದೇವಬಲ್ಲಾಳನೂ ಪೆರುಮಾಳು ಬಲ್ಲಾಳನೂ ಆತನ ಒಂದೊಂದು ಪಕ್ಕದಲ್ಲಿ ಕುಳಿತುಕೊಂಡು ಕೆಂದಾಳೆ ಎಳನೀರನ್ನು ಒಂದಿಷ್ಟು ಆತನ ಬಾಯಿಗೆ ಹೊಯ್ದರು. ಕೋಟಿಯು ಆ ಇಬ್ಬರು ಬಲ್ಲಾಳರ ಕೈಗಳನ್ನು ತನ್ನ ಕೈಗಳಿಂದ ಜೋಡಿಸಿ ಬಿಗಿಹಿಡಿದು, "ಮುಂದೆ ನೀವು ಕೈಗೂಡಿ ಬದುಕುವುದು ಒಳ್ಳೆಯದು" ಎಂದು ಹೇಳಿ, ಕಣ್ಣುಮುಚ್ಚಿದನು; ಮುಚ್ಚಿದ ಕಣ್ಣು ಮತ್ತೆ ತೆರೆಯಲೇ ಇಲ್ಲ.

ಕೋಟಿಯು ಪರಂಧಾಮಕ್ಕೆ ಹೋಗುವುದನ್ನು ಕಂಡು ಚೆನ್ನಯನು "ಅಣ್ಣ ನನ್ನು ಬಿಟ್ಟು ನಾನೇತಕ್ಕೆ ಬಾಳಲಿ? ಹುಟ್ಟುವಾಗ ಒಟ್ಟಿಗೆ ಹುಟ್ಟಿದನರು ಹೋಗುವಾಗ ಒಟ್ಟಿಗೆ ಹೋಗಬೇಕಷ್ಟೆ. ಅಣ್ಣಾ, ನಾನು ನಿಮ್ಮ ಬೆನ್ನಹಿಂದೆಯೆ ಬಂದೆ" ಎಂದು ಹೇಳಿ ಆ ದೇವಸ್ಥಾನದ ಮುಂದುಗಡೆಯಲ್ಲಿದ್ದ ಬಾವಿಯ ಬಾಯಿಕಲ್ಲಿಗೆ ತನ್ನ ತಲೆಯನ್ನು ತಾಟಾಡಿಸಿದನು. ಚೆಂದುಗಿಡಿಯ ಕತ್ತಿಯ ತಿವಿತದಿಂದ ರಕ್ತಹೋಗಿ ಮೊದಲೇ ಜರ್ಜರಿತವಾದ ಆತನ ಶಿರಸ್ಸಿನ ಒಳಗಿಂದ ಬಿಳಿ ಮೆದುಳಿನ ಮಾಲೆಯೊಂದು ಹೊರಬಂದು ದೇವಸ್ಥಾನದ ಬಲಿಪೀಠದಲ್ಲಿ ಇಟ್ಟಿದ್ದ ಮಲ್ಲಿಗೆಯ ಸರದಂತೆ ಕಲ್ಲಿನ ಮೇಲೆ ಬಿತ್ತು; ಅದರೊಂದಿಗೆ ಆತನ ಆತ್ಮವು ಮೇಲಕ್ಕೇರಿ ಹೋಯಿತು. ಕೂಡಲೆ ಆ ಶಿವಾಲಯದ ಒಳಗೆ ಉರಿಯುತ್ತಲಿದ್ದ ದೀಪಗಳೆಲ್ಲಾ ತಮ್ಮಷ್ಟಕ್ಕೆ ಆರಿಹೋದುವು; ಒಂದು ಗಳಿಗೆಯ ತನಕ ಗುಡುಗುಮಿಂಚುಗಳು ತೋರಿದುವು; ಒನಕೆಯ ಧಾರೆಯಲ್ಲಿ ಮಳೆಹೊಯ್ದು ತಟ್ಟನೆ ತಾನಾಗಿ ನಿಂತುಹೋಯಿತು.

ದೇವಬಲ್ಲಾಳನು "ಹಾ! ಹಾ! ವಿಧಿಯೇ! ಇಂದಿಗೆ ನನ್ನ ರಾಜ್ಯದಲ್ಲಿದ್ದು ನನ್ನನ್ನು ಕಾಪಾಡಿದ **ಆನೆಗಳೆ** ಬಿದ್ದುಹೋದುವೆಂದು ಮುಮ್ಮಲ

ಮರುಗಿ, ಆ ಎರಡು ಶವಗಳನ್ನು ಅಲಂಕರಿಸಿ, ತಾನು ತಂದಿದ್ದ ಪಲ್ಲಕಿಗಳಲ್ಲಿ ಇರಿಸಿ, ಮಹಾಸಂಭ್ರಮದಿಂದ ಮೆರವಣಿಗೆ ಮಾಡಿಸಿ, ಬೀಡಿಗೆ ಕೊಂಡುಬಂದನು. ಮರುದಿನ ಹದಿನೆಂಟು ಪೇಟೆಯವರು ಒಂದುಗೂಡಿ ಜಾತಿವಿಧಿಗೆ ಅನುಸಾರವಾಗಿ ಶವಸಂಸ್ಕಾರವನ್ನು ನಡಿಸಿದರು.

ಯಾವ ಹೊತ್ತಿಗೆ ಕೋಟಿಯ ಆತ್ಮವು ಕಾಯವನ್ನು ಕಳಚಿಬಿಟ್ಟಿತ್ತೋ ಆ ವೇಳೆಗೆ ರಿಯಾಗಿ ಪಡುಮಲೆಯ ಬೀಡಿಗೆ ಬೆಂಕಿ ಬಿದ್ದು ಅದು ಸುಟ್ಟು ಬೂದಿಯಾಯಿತು. ವಿಚಾರವಮಾಡಿದ್ದಲ್ಲಿ ಬೀಡಿನವರಿಗೆ ಬಹಳ ನಚ್ಚುಮೆಚ್ಚಿನವನಾಗಿ ನಡೆಯುತಿದ್ದ ಮುದುಕ ಸಾಯಿನಬೈದ್ಯನು ಬೀಡಿನೊಳಗೆ ಯಾರೂ ಇಲ್ಲದ್ದನ್ನು ಕಂಡು, ಪೂರ್ವದ್ವೇಷವನ್ನು ತೀರಿಸುವುದಕ್ಕಾಗಿ ಬೀಡಿಗೆ ಕಿಚ್ಚುಹಾಕಿದನೆಂತಲೂ, ಬೆಂಕಿಹತ್ತಿದ ತರುವಾಯ ಬೀಡಿನಿಂದ ಬೇರೆಯುವರ ಕಣ್ಮರೆಯಾಗಿ ತಪ್ಪಿಸಿಕೊಳ್ಳಲಾರದೆ ಆ ಬೆಂಕಿಯಲ್ಲಿಯೇ ಆತನು ಬಿದ್ದು ಹತನಾದನೆಂತಲೂ ಹೇಳುವರು.

ಎಣ್ಮೂರು ದೇವಬಲ್ಲಾಳನು ಕೋಟಿಚೆನ್ನಯರನ್ನು ಸುಟ್ಟು ಶುದ್ಧಮಾಡಿಸಿದ್ದಲ್ಲಿ ಅವರ ಸಮಾಧಿಗಳನ್ನು ಕಟ್ಟಿಸಿ, ಗರಡಿಗಳನ್ನು ಏರ್ಪಡಿಸಿದನು. ಆ ದೇವಸ್ಥಾನದ ನಿತ್ಯಾರ್ಚನೆಗೆ ಅಂದು ಕೋಟಿಚೆನ್ನಯರಿಗೆ ಕವಡಿಯಿಟ್ಟು ನಿಮಿತ್ತಹೇಳಿದ ಬ್ರಾಹ್ಮಣನನ್ನು ಕರೆತರಿಸಿ, ಅವನಿಗೆ ಉಂಬಳಿಯನ್ನು ಕೊಟ್ಟು, ಕೋಟಿಯ ಮಾತನ್ನು ನಡಿಸಿದನು. ಪೆರುಮಾಳು ಬಲ್ಲಾಳನು ಪಡುಮಲೆಗೆ ಹಿಂದೆರಳಿ ಹೊಸ ಬೀಡನ್ನು ಕಟ್ಟಿಸಿ, ಕೋಟಿಚೆನ್ನಯರ ಕಂಬುಳದ ಗದ್ದೆಯ ಬಳಿಯಲ್ಲಿಯೇ ಅವರ ಗುಡಿಗಳನ್ನು ಅಂದವಾಗಿ ಮಾಡಿಸಿ, ಅಲ್ಲಿ ಅವರ ಬಿಂಬಗಳನ್ನು ಪ್ರತಿಷ್ಠಿಸಿ, ತಾನು ಬದುಕಿರುವಷ್ಟು ಕಾಲ ದಿನಕ್ಕೆ ಮೂರು ಸಲ ಆ ಬಿಂಬಗಳ ದರ್ಶನವನ್ನು ಮಾಡುತಿದ್ದನು.

ಕಾಲಗತಿಯಿಂದ ತುಳುನಾಡಿನಲ್ಲಿ ಬಲ್ಲಾಳರ ಸಂಸ್ಥಾನಗಳು ಆ ಮನೆತನದವರ ಕೈಬಿಟ್ಟುಹೋದರೂ, ಅವರ ಬೀಡುಗಳು ಪಾಳುಬಿದ್ದು ಮಣ್ಣುಗುಪ್ಪೆಯಾದರೂ, ನಾಲ್ಕು ಶತಮಾನಗಳ ಹಿಂದೆ ತುಳುನಾಡಿನಲ್ಲಿ ಬಿಲ್ಲರ ಪ್ರಭಾವವು ಹೇಗೆ ಇದ್ದಿತೆಂಬುದಕ್ಕೆ ಅನೇಕ ಗ್ರಾಮಗಳಲ್ಲಿ ಕೋಟಿಚೆನ್ನಯರಿಗಾಗಿ ಕಟ್ಟಿಸಿದ ಗರಡಿಗಳು ಈಗ ಸಾಕ್ಷಿಗುಡ್ಡೆಗಳಾಗಿವೆ. ಕಾಡಿಕಾಡಿ ಅಳಿದವರ ಹೆಸರು ಅಳಿಯಿತು; ನಾಡಿನ ಹಿತಕ್ಕಾಗಿ ಕಾದಾಡಿ ಕಾಯ ಬಿಟ್ಟು ಕೈಲಾಸಕ್ಕೆ ಸಂದವರ ಹೆಸರು ಉಳಿಯಿತು.

# ಮಕ್ಕಳ ಕಥೆಗಳು

| | ರೂ. ಆ. ಪೈ |
|---|---|
| ಹೇನು ಸತ್ತು ಕಾಗೆ ಬಡವಾಯಿತು | 0—0—6 |
| ಇಲಿಗಳ ಥಕ್ಕ ಥೈ | 0—0—6 |
| ಗುಡುಗುಡು ಗುಮ್ಮಟ ದೇವರು | 0—0—6 |
| ಮೆಣಸಿನ ಕಾಳಪ್ಪ | 0—0—9 |
| ಸಿಗಡಿ ಯಾಕೆ ಒಣಗಲಿಲ್ಲ? ಹುಲಿಯೊ? ಇಲಿಯೊ? | 0—0—6 |
| ಅಂಗಳ ದುಗ್ಗ | 0—0—6 |
| ಅರ್ಗಣೆ ಮುದ್ದೆ | 0—0—6 |
| ಒಡ್ಡನ ಓಟ | 0—1—0 |
| ಮೂರು ಕರಡಿಗಳು | 0—0—6 |
| (ಈ 9 ಕಥೆಗಳು ಒಟ್ಟಿಗೆ ಬೈಂಡು ಮಾಡಿಸಿದ್ದು 0—5—0) | |
| ಮಾತಾಡೋ ರಾಮಪ್ಪ | 0—0—9 |
| ಜಟ್ಟೀಬಸವಯ್ಯ | 0—0—9 |
| ಗೋವಿಂದಾ! ಗೋವಿಂದಾ!! | 0—1—0 |
| ಜೋಡುನಕ್ಷತ್ರ | 0—0—9 |
| ಗೋಣಿತಟ್ಟಿನ ಪಟ್ಟೆಹುಲಿ ಮತ್ತು ಗುಬ್ಬಿಗಳ ಕಥೆ | 0—2—0 |
| ಬೊಕ್ಕಬಾಯಿ ಕೊಕ್ಕರಾಜ | 0—1—6 |
| ತಟಪಟ ಹನಿಯಪ್ಪ | 0—0—9 |
| ಕೊ—ಕ್ಕೊ—ಕ್ಕೋ—ಕೋಳಿ | 0—0—9 |
| ಅಗೋಳಿ ಮಂಜಣ | 0—1—6 |
| ಅಜ್ಜಿ ಸಾಕಿದ ಮಗು | 0—2—0 |
| ಸಿಂದಬಾದ ನಾವಿಕ | 0—2—0 |
| ಅರಬಸ್ಥಾನ (ಸಚಿತ್ರ) | 0—2—0 |
| ಚೀನ (ಸಚಿತ್ರ) | 0—2—0 |
| ಅಲ್ಲಾವುದ್ದೀನನ ವಿಚಿತ್ರದೀಪ | 0—2—0 |